# ಅನಿಕೇತನ

ಅನ್ಯಭಾಷೆಗಳ ಸಾಹಿತ್ಯ ಹಾಗೂ ಸಾಹಿತ್ಯ ಚಿಂತನಕ್ಕೆ ಮೀಸಲಾದ ತ್ರೈಮಾಸಿಕ

ಸಂಪಾದಕರು

ಡಾ. ನಟರಾಜ್ ಹುಳಿಯಾರ್

ಡಾ. ಬಸವರಾಜ ಕಲ್ಗುಡಿ

ಡಾ. ಬಾಲಚಂದ್ರ ಜಯಶೆಟ್ಟಿ



ಕರ್ನಾಟಕ ಸಾಹಿತ್ಯ ಅಕಾಡೆಮಿ

ನೃಪತುಂಗ ರಸ್ತೆ, ಬೆಂಗಳೂರು-೫೬೦ ೦೦೨

ಅನಿಕೇತನ
ಕರ್ನಾಟಕ ಸಾಹಿತ್ಯ ಅಕಾಡೆಮಿಯ ಕನ್ನಡ ತ್ರೈಮಾಸಿಕ

ಜನವರಿ - ಮಾರ್ಚ್ 1997
(ಸಂಯುಕ್ತ ಸಂಚಿಕೆ)
6 - 4 ರಿಂದ 9 - 4

ಪ್ರಧಾನ ಸಂಪಾದಕರು :

**ಶಾಂತರಸ**
ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು-560 002

ಪ್ರಕಾಶಕರು :

**ಎಂ. ಜಿ. ಸದಾನಂದಯ್ಯ**
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ
14/3ಅ, ನೃಪತುಂಗ ರಸ್ತೆ, ಬೆಂಗಳೂರು-560 002

ವಾರ್ಷಿಕ ಚಂದಾ : ರೂ. 20-00

ಆಜೀವ ಚಂದಾ : ರೂ. 200-00

ಮುದ್ರಕರು :

ಇಳಾ ಪ್ರಿಂಟರ್ಸ್
153, 4ನೇ ಮುಖ್ಯರಸ್ತೆ, 8ನೇ ಕ್ರಾಸ್
ಚಾಮರಾಜಪೇಟೆ, ಬೆಂಗಳೂರು-560 018
ದೂರವಾಣಿ : 623159

# ಪರಿವಿಡಿ

## ಕವಿತೆ



## ಭಾರತೀಯ ಸಾಹಿತ್ಯ ವಿಮರ್ಶೆ : ಹೊಸ ವಾಗ್ವಾದಗಳು

# ಸಂಪಾದಕರ ಮಾತು

'ಅನಿಕೇತನ'ದ ಹೊಸ ಸಂಪಾದಕೀಯ ಸಮಿತಿಯ ಮೊದಲ ಸಂಚಿಕೆ ಇದು. ಈ ಸಂಚಿಕೆ ಸ್ವಲ್ಪ ತಡವಾಗಿ ಬರುತ್ತಿದೆ. ಇದಕ್ಕೆ ಮುಖ್ಯ ಕಾರಣವೆಂದರೆ, ಮೌಲಿಕವಾಗಿದ್ದೂ ಓದುಗರ ಓದುವಿಕೆಗೂ ಭಾರವಾಗದೇ ಇರುವಂಥ ಲೇಖನಗಳನ್ನು ಹೊಂದಿಸುವುದು ಹಾಗೂ ಅನುವಾದ ಮಾಡಿಸುವುದು ಸರಿಯಾದ ಸಮಯಕ್ಕೆ ಸಾಧ್ಯವಾಗದೇ ಹೋದದ್ದು. ತಡವಾದರೂ ಲೇಖನಗಳ ಮೌಲಿಕತೆಗೆ ಕೊರತೆಯಾಗಬಾರದೆಂಬುದು ನಮ್ಮ ಉದ್ದೇಶ. ಈ ಪ್ರಯತ್ನದಲ್ಲಿ ಕೊಂಚಮಟ್ಟಿಗಾದರೂ ಯಶಸ್ವಿಯಾಗಿದ್ದೇವೆಂಬ ನಂಬಿಕೆ ನಮ್ಮದು.

ಈ ಸಂಚಿಕೆಯಲ್ಲಿ ರವೀಂದ್ರರ ಸಾಹಿತ್ಯವನ್ನು ಕುರಿತ ಚರ್ಚೆಯಿದೆ. ಕಳೆದ ವರ್ಷ ಭಾವನಾತ್ಮಕ ಬಿರುಗಾಳಿಯನ್ನು ಎಬ್ಬಿಸಿದ ವಾದ ವಿವಾದಕ್ಕೆ ವೈಚಾರಿಕ ನೆಲೆಗಟ್ಟನ್ನು ಈ ಚರ್ಚೆ ರೂಪಿಸುತ್ತದೆ. ಭಾಷೆ ಮತ್ತು ಆಳುವ ಪ್ರಭುತ್ವದ ಶಕ್ತಿ ಇವೆರಡರ ನಡುವಣ ಸಂಬಂಧ ಕುರಿತ ಅನೇಕ ಕುತೂಹಲಕಾರಿ ಅಂಶಗಳನ್ನು ಭಾಷಾಶಾಸ್ತ್ರಜ್ಞ ಕೇಳ್ಕರ ಅವರು ಅಸಾಂಪ್ರದಾಯಕ ಶೈಲಿಯ ಬರಹವೊಂದರಲ್ಲಿ ಕೊಟ್ಟಿದ್ದಾರೆ. ಭಾರತೀಯ ಸಾಹಿತ್ಯ ವಿಮರ್ಶೆಯ ಹೊಸ ಪ್ರಸ್ಥಾನಗಳನ್ನು ಪರಿಚಯಿಸುವ ಉದ್ದೇಶದಿಂದ ಇಂದಿನ ಮುಖ್ಯ ವಿಮರ್ಶಕರಾಗಿರುವ ಜಿ. ಎನ್. ದೇವಿಯವರ ವಿಮರ್ಶಾ ಲೇಖನವೊಂದನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಇವುಗಳಲ್ಲದೇ ಕನ್ನಡ ಭಾಷೆಯಲ್ಲಿ ಮೊದಲ ಬಾರಿಗೆ ಪಾಕಿಸ್ತಾನಿ ಸ್ತ್ರೀವಾದಿ ಕವಿತೆಗಳ ಅನುವಾದಗಳು ಇಲ್ಲಿವೆ. ಉರ್ದು ಸಾಹಿತ್ಯದ ಈಚಿನ ಒಲವುಗಳನ್ನು ಪ್ರತಿಬಿಂಬಿಸಬಲ್ಲ ಕತೆ, ನಾಟಕ, ಕವಿತೆಗಳೂ ಇವೆ. ಜಾಗತಿಕ ಮಟ್ಟದಲ್ಲಿ ಹೆಚ್ಚು ಚರ್ಚೆಗೆ ಗುರಿಯಾಗುವ ಹೊಸ ಪುಸ್ತಕಗಳ ಪರಿಚಯ ಕೊಡುವ ಉದ್ದೇಶದಿಂದ ಸಲ್ಮಾನ್ ರಶ್ದಿ ಅವರ "ದ ಮೋರ್ಸ್ ಲಾಸ್ಟ್ ಸೈ" ಪುಸ್ತಕದ ಪರಿಚಯವೂ ಇದೆ. ಈ ಅಂಕಣವನ್ನು ನಿಯಮಿತವಾಗಿ ಮುಂದುವರಿಸುವ ಉದ್ದೇಶ ನಮ್ಮದು.

'ಅನಿಕೇತನ'ದ ಮುಂದಿನ ಸಂಚಿಕೆಗಳನ್ನು ಮತ್ತಷ್ಟು ಉತ್ತಮಪಡಿಸುವ ದಿಸೆಯಲ್ಲಿ ಓದುಗರ ಸಲಹೆ, ಸಹಕಾರ ಕೋರುತ್ತಿದ್ದೇವೆ.

- ಸಂಪಾದಕ ಮಂಡಲಿ

# ಪಾಕಿಸ್ತಾನಿ ಸ್ತ್ರೀವಾದಿ ಕಾವ್ಯ

ಕಳೆದೊಂದು ದಶಕದಲ್ಲಿ ಹೊರಬಂದಿರುವ ಪಾಕಿಸ್ತಾನದ ಸ್ತ್ರೀವಾದಿ ಕಾವ್ಯದಿಂದಾಗಿ ಪಾಕಿಸ್ತಾನದ ಸಾಹಿತ್ಯ ಲೋಕದಲ್ಲಿ ಹೊಸ ಜೀವಸಂಚಾರವಾಗಿದೆ. ಜಗತ್ತಿನ ಎಲ್ಲೆಡೆ ಸ್ತ್ರೀವಾದಿಗಳು ಎತ್ತುತ್ತಿರುವ ಪ್ರಶ್ನೆಗಳೇ ಪಾಕಿಸ್ತಾನಿ ಸ್ತ್ರೀವಾದಿ ಕಾವ್ಯದಲ್ಲೂ ಪುನರಾವರ್ತನೆಗೊಂಡಿವೆ, ನಿಜ. ಆದರೆ ಈ ಕವಿತೆಗಳಲ್ಲಿರುವ ಸಂಸ್ಕೃತಿ ವಿಶಿಷ್ಟ ಪ್ರತಿಮೆಗಳಿಂದಾಗಿ ಈ ಪ್ರಶ್ನೆಗಳಿಗೆ ಹೊಸ ಖದರ್ ಬಂದಿದೆ. ಕೊಂಚ ಅಬ್ಬರದ ದನಿಯುಳ್ಳ ಈ ಕವಿತೆಗಳಲ್ಲಿ ಸ್ಪಷ್ಟ ಚಾರಿತ್ರಿಕ ಚಲನೆಗಳ ಗುರುತುಗಳಿವೆ. ಈ ಕಾವ್ಯದ ಕೆಲವು ಮುಖಗಳನ್ನು ಪರಿಚಯಿಸುವ ಅನುವಾದಗಳು ಮುಂದಿನ ಪುಟಗಳಲ್ಲಿವೆ. ಇಂಗ್ಲಿಷಿನಿಂದ ಮಾಡಲಾದ ಅನುವಾದಗಳಿವು.

- ಸಂ.

# ಫೆಬ್ರವರಿ ಹನ್ನೆರಡು ೧೯೮೩

ಮೂಲ : ಸಯೀದಾ ಗಜ್ದಾರ್
ಅನು : ಪ್ರತಿಭಾ ನಂದಕುಮಾರ್

[ಪಾಕಿಸ್ತಾನದಲ್ಲಿ ಇಸ್ಲಾಮಿಕ್ ಕಾನೂನು ಜಾರಿಗೆ ಬಂದ ಮೇಲೆ, ನ್ಯಾಯಾಲಯದಲ್ಲಿ ಒಂದು ಗಂಡಿನ ಸಾಕ್ಷಿಗೆ ಸಮನಾಗಿ ಇಬ್ಬರು ಹೆಣ್ಣುಗಳು ಸಾಕ್ಷಿ ಹೇಳಬೇಕೆಂದು ವಿಧಿಸಲಾಯಿತು. ಇದರಿಂದ ಕಾನೂನು ವ್ಯವಹಾರಗಳಲ್ಲಿ ಆಗುವ ತೊಡಕುಗಳನ್ನು ವಿವರಿಸಿ ಮಹಿಳಾ ಲಾಯರ್‌ಗಳು ೧೯೮೩ರ ಫೆಬ್ರುವರಿ ೧೨ರಂದು ಲಾಹೋರಿನಲ್ಲಿ ಪ್ರತಿಭಟನಾ ಮೆರವಣಿಗೆ ಮಾಡಿದರು. ಕೇವಲ ಇನ್ನೂರು ಮಹಿಳೆಯರಿದ್ದ ಈ ಶಾಂತ ಮೆರವಣಿಗೆಯನ್ನು "ಹಿಂಸಾಕೃತ್ಯಕ್ಕೆ ತೊಡಗಿದರು" ಎನ್ನುವ ನೆಪವೊಡ್ಡಿ ಪೋಲೀಸರು ಲಾಠಿ ಪ್ರಯೋಗ, ಅಶ್ರುವಾಯು, ಬಂಧನ ಮೊದಲಾದ ಕ್ರಮ ಕೈಗೊಂಡು ಚೆದುರಿಸಿದರು. ಸಯೀದಾ ಗಜ್ದಾರ್ ರಚಿಸಿದ ಈ ಕವನ ಪಾಕಿಸ್ತಾನದ ಸಮಕಾಲೀನ ಸಾಮಾಜಿಕ ಹಾಗೂ ರಾಜಕೀಯ ಸಂದರ್ಭದಲ್ಲಿ ಸ್ತ್ರೀ ಬಂಡಾಯದ ಮಹತ್ವದ ಕವನ ಎನ್ನಿಸಿಕೊಂಡಿದೆ]

ಮರಿಯಂ ಕೇಳೇ, ಖದೀಜಾ ಕೇಳೇ, ಕೇಳೇ ಫಾತಿಮಾ
ಹೊಸ ವರ್ಷದ ಶುಭ ಸಮಾಚಾರ ಕೇಳಿರೇ.
ಹೆಣ್ಣು ಹುಟ್ಟಿತೆಂದು ಈಗವರು
ವಿಷದ ಇಂಜೆಕ್ಷನ್‌ಗಳನ್ನು ಕೈಗೆತ್ತಿಕೊಳ್ಳುತ್ತಾರೆ,
ಆ ಕೈಗಳಲ್ಲೇ ಅಲ್ಲವೇ ಕಾನೂನು, ಅಧಿಕಾರಗಳಿರುವುದು?
ಹೂವು, ಅರಿವು, ಸ್ವಾತಂತ್ರ್ಯಗಳ
ವಿರುದ್ಧ ತೊಡೆ ತಟ್ಟಿ ನಿಂತವರು
ಅವರಲ್ಲವೇ ಈಗ ಆಳುವವರು?

ಹೌದು ಕೇಳೇ ಮರಿಯಂ, ಕೇಳೇ ಖದೀಜಾ, ಫಾತಿಮಾ ಕೇಳೇ

ಅವರ ಎಲ್ಲ ನಿಯಮಗಳನ್ನು ನೀವು
ಕಣ್ಣಿಂದ ಸ್ಪರ್ಶಿಸಿ
ತುಟಿಗಳಿಂದ ಮುದ್ದಿಸಿ

ಹೃದಯ ತುಂಬಿ ಸ್ವಾಗತಿಸಬೇಕು.
ಮನೆಯ ಮಹಾರಾಣಿ
ಮಕ್ಕಳ ತಾಯಿ
ಸದಾ ಸೇವೆಯಲ್ಲಿ ತಲೆಬಾಗಿ
ಎಷ್ಟು ಚೆನ್ನಾಗಿದ್ದೀಯಲ್ಲೇ
ರಕ್ಷಿತೆ, ನೀನು ಗೌರವಾನ್ವಿತೆ
ಪೂಜೆಯ ಪೀಠಕ್ಕೆ, ಸ್ವರ್ಗಕ್ಕೆ ನಿನಗೇ ಹಕ್ಕು
ನಿನ್ನ ಒಳಿತಿಗಾಗೇ ಅವರು ಹೇಳುತ್ತಾರೆ
ಅರ್ಥ ಮಾಡಿಕೋ 'ಎರಡು ಹೆಣ್ಣುಗಳ ಸಾಕ್ಷಿ'
ಹೊರಗೆ ಹೋಗುವುದಂತೂ ಸರಿಯಲ್ಲ
ಒಳ ಹೊರಗೆ ಓಡಾಡುವುದು ಸರಿಯಲ್ಲ
ಇದು ಸ್ವರ್ಗದ ನಿಯಮ
ಮೀರಿದವರಿಗೆ ತಲೆದಂಡ [1]

ರಸ್ತೆಗಿಳಿದು ಹೋರಾಡುವುದೆಂದರೆ
ಸ್ವಾತಂತ್ರ್ಯದ ಹಕ್ಕು ಕೇಳುವುದೆಂದರೆ
ಹೆಣ್ತನಕ್ಕೇ ಅವಮಾನ
ರೌಡಿಗಳ ರೀತಿಯದು.
ಈ ನಾಜೂಕು ದೇಹವೇಕೆ ದಣಿಯಬೇಕು?
ಗಾಜುಗೊಂಬೆ ನೀನು
ಕಣ್ಣಿಗೆ ಬಿದ್ದರೆ ಒಡೆದು
ನೂರು ಚೂರಾಗುವೆ
ಬಿಸಿಲಲ್ಲಿ ಕರಗುವೆ
ಇನ್ನು ಕೋರ್ಟಿನಲ್ಲಿ ಸತ್ಯ ಹೇಳುವುದೇ?
ಮುಜುಗರದಲ್ಲಿ ಮೂರ್ಛೆ ಹೋಗುವೆ.

ಶೋಕ ಬಾವುಟಗಳು ಹಾರಾಡುತ್ತಿದ್ದವು.
ಸೇವಕಿಯರು ಸಿಡಿದೆದ್ದಿದ್ದರು.
ರಸ್ತೆಗಿಳಿದ ಆ ಇನ್ನೂರು ತರುಣಿಯರನ್ನು

---

1. ಸನಾತನಿಗಳು ಪ್ರತಿಪಾದಿಸುವ ಬೇಡಿಕೆಗಳಲ್ಲಿ ಒಂದು.

ಎಲ್ಲ ಕಡೆಗಳಿಂದ ಸುತ್ತುವರಿಯಲಾಗಿತ್ತು.
ಸಶಸ್ತ್ರ ಪಡೆಗಳು
ಅಶ್ರುವಾಯು, ರೈಫಲ್, ಗನ್‌ಗಳು,
ವೈರ್‌ಲೆಸ್ ವ್ಯಾನ್‌ಗಳು ಮತ್ತು ಜೀಪುಗಳು.
ಎಲ್ಲ ದಾರಿಗಳೂ ಮುಚ್ಚಿದ್ದವು.
ರಕ್ಷಣೆ ಎನ್ನುವುದಿರಲಿಲ್ಲ.
ಅವರು ಸ್ವತಃ ಹೋರಾಡಬೇಕಿತ್ತು.

ಜಮಿಯತ್‌ನ ಮುದ್ದು ಕಂದಗಳು
ಆ ರೌಡಿಗಳು
ರಸ್ತೆ ರಸ್ತೆಗಳಲ್ಲಿ ಹಾಲಾಡಿ
ಬೆಂಕಿ ಹಚ್ಚಿ ಲೂಟಿ ಮಾಡಿ
ಈಟಿ ಗುರಾಣಿಗಳನ್ನು ಝಳಪಿಸಿ
ಜನರು ಭೀತಿಯಲ್ಲಿ ನಡುಗಿದಾಗ
ಇದೇ ಈ ಹೆಲ್ಮೆಟ್ ಧಾರಿಗಳು
ದೂರ ನಿಂತು ಮುದ್ದಿನಲ್ಲಿ ನಕ್ಕು
"ಪಾಪ....... ಅವರಿನ್ನೂ ಮಕ್ಕಳು...."
ಎಂದು ಹಾಲು ಕುಡಿಸಿದರು.

ಹೆಣ್ಣುಗಳನ್ನು ಅವರ ಪಾಡಿಗೆ ಬಿಡಿ
ನಿಮ್ಮ ಹಿತಾಸಕ್ತಿಗಳನ್ನು ನೋಡಿಕೊಳ್ಳಿ ಸಾಕು.
ಈ ಎಲ್ಲ ಟೊಳ್ಳು ನೀತಿ ನಿಯಮಗಳು
ನಿಮ್ಮದೇ ಅಧಿಕಾರಕ್ಕಾಗಿ.
ಇವನ್ನೆಲ್ಲ ನನಗೆ ಯಾಕೆ ವಿವರಿಸುತ್ತೀರಿ?
ಇಸ್ಲಾಂ ಎನ್ನುವುದು ಅಷ್ಟು ಕಷ್ಟವೇ?
ಹಿಂದೆ ಜನರು ಪ್ರಾರ್ಥಿಸಿರಲಿಲ್ಲವೇ?
ಉಪವಾಸವಿದ್ದಿರಲಿಲ್ಲವೇ?
ಕುರಾನ್, ಕಲಿಮಾ[2] ಗಳನ್ನು ನಂಬಿರಲಿಲ್ಲವೇ?

---

2. ಕಲಿಮಾ - ದೇವರ ಏಕತ್ವ ಮತ್ತು ಮಹಮ್ಮದನ ಸಂತತ್ವವನ್ನು ಸಾಬೀತು ಮಾಡುವ ಮೂಲ ನಂಬಿಕೆಯ ಬರಹ.

ಮತ್ತೇಕೆ ಯೌವನವನ್ನು ಹಾಳುಗೆಡವಬೇಕು?
ಈ ಕ್ರೂರ ಅಸಹನೆಯೇಕೆ?
ಸಣ್ಣ ಪುಟ್ಟದಕ್ಕೆಲ್ಲ ಛಾಟಿಯೇಟು ಏಕೆ?
ನಾನು ಓದಿದ್ದೇನೆ ಸ್ವಾತಂತ್ರ್ಯದ ಅಧ್ಯಾಯ
ನೀವು?
ಸ್ಪಷ್ಟವಾಗಿದೆ ದಪ್ಪಕ್ಷರಗಳಲ್ಲಿ ಬರೆದ
ಗೋಡೆಯ ಬರಹ
ನಿಮಗೆ ಓದಲು ಬರುವುದಿಲ್ಲವೇ?

ನಿಮಗೇಕನ್ನಿಸಿತು
ನಿಮಗೆ ಜನ್ಮ ಕೊಟ್ಟ ನಾನು
ನಿಮ್ಮೆದುರು ನಾಚಿ ನಿಲ್ಲುವೆನೆಂದು
ಸತ್ಯ ನುಡಿಯಲು ಓಂಜರಿಯುವೆನೆಂದು
ನಮ್ಮ ನಡುವಿನ
ಪ್ರೀತಿ-ದ್ವೇಷದ, ಗೌರವ-ತಿರಸ್ಕಾರದ
ಸಂಬಂಧವನ್ನು ಈ ನಾಲಿಗೆಯಲ್ಲಿ
ವಿವರಿಸಲಾರೆನೆಂದು?

ಹೆಣ್ಣಿನ ಸತ್ಯಕ್ಕೆ ಹೆದರುವಿರಾ?
ನಾನು ಮೂಕಳೇ?
ಅಥವಾ ನನ್ನ ಬುದ್ಧಿಗೇನು ಲಕ್ವಾ ಬಡಿದಿದೆಯೇ?
ಪಕ್ಕದಲ್ಲಿ ನಿಂತು ಇನ್ನೊಬ್ಬಳು ನನಗೆ
ನೆನಪು ಮಾಡಿಕೊಡಬೇಕೇ?
ಎಲ್ಲ ವಿವರಗಳೂ ನನಗೆ ನೆನಪಿವೆ.
ನಿಮಗೂ ನೆನಪಿಸ ಬಯಸುತ್ತೇನೆ
ಮರೆಯಬೇಡಿ.... ಕಾನೂನಿನನ್ವಯ
ಕ್ರೌರ್ಯವನ್ನೂ ಗುರುತಿಸಬಹುದು
ಅರ್ಥ ಮಾಡಿಕೊಳ್ಳಬಹುದು.

ಮಾನವ ಜೀವಿ ಎನ್ನುವ ಪಟ್ಟವನ್ನು ಕಿತ್ತುಕೊಳ್ಳುವಿರಾ?
ಇನ್ನು ನಿಮಗೆ ಜನ್ಮ ಕೊಡಲು ನಾನು ನಿರಾಕರಿಸುತ್ತೇನೆ.

ನನ್ನ ದೇಹವಿರುವುದು ಹೆರಲು ಮಾತ್ರವೇ?
ಬಸಿರಲ್ಲಿ ಮಗುವನ್ನು ಹೊತ್ತು ಪೋಷಿಸಿ
ನಿಮಗಾಗಿ ಕುರುಡು, ಕಿವುಡು, ಮೂಗ
ಸೇವಕಿಯರ ಸೈನ್ಯ ಹೆತ್ತು ಕೊಡಲೇ?
ನಮಗೆ ಗೊತ್ತು.
ನಿಮ್ಮ ಜೊತೆಗಿರುವುದೆಂದರೆ
ನಮ್ಮ ಮಕ್ಕಳ ಗೋರಿಗಳನ್ನು ಅಗೆದಂತೆ
ನಾವು ನಿಮ್ಮ ಜೊತೆಗಿರುವುದಿಲ್ಲ.

ನೀವು ಇಬ್ಬರನ್ನು ಕೇಳುತ್ತೀರಿ
ನಾವು ಎರಡು ಕೋಟಿ ಹೆಂಗಸರು
ಸಾಕ್ಷಿ ಹೇಳುತ್ತೇವೆ
ಕಾನೂನಿನ ಹೆಸರಿನಲ್ಲಿ
ನಮ್ಮ ತಲೆಗಳ ಮೇಲೆ ನೀವು
ಎಳೆದಿರುವ ರಾಕ್ಷಸೀ ಬಂಡೆಯ ವಿರುದ್ಧ

ನಾವಲ್ಲ ನೀವು
ಸಾಯಲರ್ಹರು -
ಬೆಳಕು ಸತ್ಯಗಳ ಶತ್ರುಗಳಾದ್ದರಿಂದ
ಪ್ರೀತಿಯ ಕೊಲೆಗಡುಕರಾದ್ದರಿಂದ.

# ಅವಳು ಅಪವಿತ್ರ ಹೆಣ್ಣು

ಮೂಲ : ಫಹ್ಮಿದಾ ರಿಯಾಜ್
ಅನು : ಪ್ರತಿಭಾ ನಂದಕುಮಾರ್

ತಿಂಗಳು ವರ್ಷಗಳ ಋತು ಚಕ್ರದಲ್ಲಿ
ಹರಿಯುವ ತನ್ನದೇ ರಕ್ತದಲ್ಲಿ ಬಂಧಿಯಾದ
ಅವಳೊಬ್ಬಳು ಅಪವಿತ್ರ ಹೆಣ್ಣು.

ಕಾಮನೆಗಳ ಕೊಳ್ಳಿ ಉರಿಯಿಟ್ಟು
ತನ್ನದೇ ಬಯಕೆಗಳ ಹುಡುಕಾಟದಲ್ಲಿ
ಸೈತಾನನ ಪ್ರೇಯಸಿಯಿವಳು
ಅವನ ಹೆಜ್ಜೆಯನ್ನನುಸರಿಸಿ
ಅಸ್ಪಷ್ಟ ಗುರಿಗಳೆಡೆಗೆ ಸಾಗಿದಳು.
ಈ ಮೊದಲು ಕಂಡಿಲ್ಲದ
ಬೆಳಕು ಶಾಖಗಳ ಗುಪ್ತ ಐಕ್ಯದ ಕಡೆಗೆ

ಕುದಿಯುವ ಬಯಕೆಗಳ ಬಿಸಿಯಲ್ಲಿ ಅವಳ ಎದೆ ಹರಿಯಿತು
ದಾರಿ ಬದಿಯ ಮುಳ್ಳುಗಳು
ಅಂಗಾಂಗ ಸೀಳಿದವು.
ನಾಚಿಕೆಯ ಯಾವ ಮುಸುಕೂ ಮುಚ್ಚಲಿಲ್ಲ
ಅವಳ ದೇಹ ಪಾತಿವ್ರತ್ಯದ ಕುರುಹನ್ನೂ
ತೊಡಲಿಲ್ಲ.

ಆದರೆ, ಓ ನೆಲ ಜಲಗಳ ಒಡೆಯನೇ
ಇದನ್ನಾರು ಕಂಡಿದ್ದರು ಮೊದಲು?
ಈ ಅಪವಿತ್ರ ಹೆಣ್ಣನ್ನು ಬಿಟ್ಟರೆ
ಉಳಿದೆಲ್ಲ ಕಡೆ ನಿನ್ನದೇ ಆಳ್ವಿಕೆ.
ಅವಳ ತುಟಿಗಳಿಂದ ಪ್ರಾರ್ಥನೆ
ಅವಳ ಹಣೆಗ್ಯಾವ ಅವಮಾನವೂ ತಟ್ಟದು.

## ಹೊಂದಾಣಿಕೆ

ಮೂಲ : ಜೆಹ್ರಾ ನಿಗಾಹ್
ಅನು : ಪ್ರತಿಭಾ ನಂದಕುಮಾರ್

ಹೊಂದಾಣಿಕೆಯ ಈ ಬೆಚ್ಚಗಿನ ಮೃದು 'ಚದರ್'
ವರ್ಷಗಳೇ ಹಿಡಿಸಿತು ನನಗೆ ಹೆಣೆಯಲು
ಸತ್ಯದ ಯಾವ ಹೂಗಳೂ ಅದನ್ನು ಸಿಂಗರಿಸಿಲ್ಲ
ಬಿಟ್ಟು ಕೊಡುವುದಿಲ್ಲ ಒಂದೇ ಒಂದು ಸುಳ್ಳು ಹೊಲಿಗೆ.

ಆದರೂ ನನ್ನ ದೇಹ ಮುಚ್ಚಲು ಇದು ಸಾಕು
ಜೊತೆಗೆ ಸಾಂತ್ವನವನ್ನೂ ಕೊಡಲು,
ಹರ್ಷವಿಲ್ಲದಿದ್ದರೂ ಇದರಿಂದ ದುಃಖವೂ ಇಲ್ಲ.

ಮೇಲೆ ಹರಡಿದರೆ ಇದು ನಮ್ಮ ಮನೆಯಾಗಿ
ಕೆಳಗೆ ಹಾಸಿದರೆ ತೋಟವಾಗಿ ಅರಳಿ
ಎತ್ತಿ ನಿಲ್ಲಿಸಿಬಿಟ್ಟರಂತೂ ಇದು ಸುತ್ತಲ
ಪರದೆಯಾಗಿ ಬಿಡುತ್ತದೆ.

---

ಚದರ್ : ಮೇಲು ಮುಸುಕು

●

## ನಾವು ಕಡುಪಾಪಿ ಹೆಣ್ಣುಗಳು

ಮೂಲ : ಕಿಶ್ವರ್ ನಹೀದ್
ಅನು : ಡಾ. ಎಸ್. ವಿ. ಪ್ರಭಾವತಿ

ಕಡುಪಾಪಿ ಹೆಣ್ಣುಗಳು ನಾವು
ಆ ಗೌನು ತೊಟ್ಟವರ ವೈಭವಕ್ಕೆಲ್ಲ ನಿಬ್ಬೆರಗಾಗುವುದಿಲ್ಲ ನಾವು

ಬದುಕು ಮಾರಿಕೊಳ್ಳುವುದಿಲ್ಲ ನಾವು
ತಲೆ ಬಾಗುವುದಿಲ್ಲ ನಾವು
ಕೈ ಮುಗಿಯುವುದಿಲ್ಲ ನಾವು

ನಾವು ಕಡುಪಾಪಿ ಹೆಣ್ಣುಗಳು
ನಮ್ಮ ದೇಹದ ಸುಗ್ಗಿ ಬೆಳೆಯ ಕಟಾವು ಮಾಡಿದವರು
ಮೆಲ್ಲನೆ ಮೇಲೇರುತ್ತಿದ್ದಾರೆ
ಈ ಲೋಕಕ್ಕೆಲ್ಲ ತಾವೇ ಅರಸರಾಗಿ ಮೆರೆಯುತ್ತಿದ್ದಾರೆ

ನಾವು ಕಡುಪಾಪಿ ಹೆಣ್ಣುಗಳು
ಹೆದ್ದಾರಿ ಸುಳ್ಳುಗಳ ಅಡೆತಡೆಗಳ ಎದುರು
ಸತ್ಯದ ಬ್ಯಾನರ್ ಎತ್ತಿ ಓಡಿದು ಹೊರ ಬಂದವರು
ಪ್ರತಿ ಹೊಸ್ತಿಲ ಮೇಲೆ ಪೇರಿಸಿಟ್ಟ ಶಿಕಾರಿಗಳ ಕತೆ ಬಲ್ಲವರು
ಮಾತಾಡ ಹೊರಟ ನಾಲಗೆಗಳು ಕತ್ತಿಯೇಟಿಗೆ ಸಿಕ್ಕಿ
ಕಳಚಿ ಬಿದ್ದದ್ದನ್ನು ಕಣ್ಣಾರೆ ಕಂಡವರು

ನಾವು ಕಡುಪಾಪಿ ಹೆಣ್ಣುಗಳು
ಈ ಇರುಳು ನಮ್ಮನ್ನು ಅಟ್ಟಿ ಬಂದರೂ
ನಮ್ಮ ಕಣ್ಣ ಬೆಳಕನ್ನಂತೂ ಆರಿಸಲು ಸಾಧ್ಯವಿಲ್ಲ
ಕಾರಣ, ನಾವು ಒದ್ದು ಬೀಳಿಸಿದ ಆ ಗೋಡೆ
ಈಗ ಮತ್ತೆ ಮೇಲೇಳುತ್ತೇನೆಂದು ನಿಮಿರುವುದಿಲ್ಲ

ನಾವು ಕಡುಪಾಪಿ ಹೆಣ್ಣುಗಳು
ಆ ಗೌನು ತೊಟ್ಟವರ ವೈಭವಕ್ಕೆಲ್ಲ ನಿಬ್ಬೆರಗಾಗುವುದಿಲ್ಲ ನಾವು

ದೇಹ ಮಾರಿಕೊಳ್ಳುವುದಿಲ್ಲ ನಾವು
ತಲೆ ಬಾಗುವುದಿಲ್ಲ ನಾವು
ಕೈ ಮುಗಿಯುವುದಿಲ್ಲ ನಾವು.

# ಈ ಹುಲ್ಲು ನಿಜಕ್ಕೂ ನನ್ನಂತೆಯೇ

ಮೂಲ : ಕಿಶ್ವರ್ ನಹೀದ್
ಅನು : ಡಾ. ಎಸ್. ವಿ. ಪ್ರಭಾವತಿ

ಈ ಹುಲ್ಲೂ ನನ್ನಂತೆಯೇ
ಇದು ಕಾಲ ಕೆಳಗೇ ಸುರುಳಿ ಬಿಚ್ಚುತ್ತ ಬೆಳೆಯಬೇಕಿದೆ
ಆದರೆ ಅದರ ತೇವ ಮಾತ್ರ ಬೇರೇನೋ ಹೇಳುತ್ತಿದೆ :

ಅದು ಸುಡುವ ಅವಮಾನದ ಉರಿಯೆ?
ಕುದಿ ಕುದಿವ ಭಾವನೆಗಳ ಬೆಂಕಿಯೆ?

ಈ ಹುಲ್ಲೂ ನನ್ನಂತೆಯೇ
ಅದಿನ್ನೂ ತಲೆಯೆತ್ತುವುದಕ್ಕಿಲ್ಲ
ಆಗಲೇ ಮಾಲಿಯ ಕೆಟ್ಟ ಕಣ್ಣಿಗೆ ಬಿದ್ದು
ತಲೆ ಕತ್ತರಿಸಿಕೊಂಡು ನೆಲಸಮವಾಗುತ್ತದೆ - ಮಕಮಲ್ಲಿನಂತೆ
ಹೀಗೆ ಹೆಣ್ಣನ್ನೂ ನೆಲಸಮ ಮಾಡಲು ನೀವು ಅದೆಷ್ಟು ಹೆಣಗುತ್ತೀರಿ!

ಆದರೂ ನೆನಪಿರಲಿ
ಈ ನೆಲದೊಳಗೆ, ಹೆಣ್ಣೊಳಗೆ
ಪುಟಿವ ಬದುಕಿನ ಬಯಕೆ ಸುಲಭದಲ್ಲಿ ಇಂಗುವುದಿಲ್ಲ.
ನನ್ನ ಮಾತು ಕೇಳಿ :
ಕಾಲುಹಾದಿ ಮಾಡುವುದೇ ಸರಿ.

ತಮ್ಮ ಬಲವೆಲ್ಲ ಕಂದಿದ್ದನ್ನು ತಡೆಯಲಾಗದವರೆಲ್ಲ
ನೆಲದೊಂದಿಗೆ ಬೆರೆತು ಬಿಡುತ್ತಾರೆ.
ಬಲಶಾಲಿಗಳಿಗೆ ಹಾದಿ ಮಾಡಿ ಕೊಡುತ್ತಾರೆ.
ಆದರೆ ಅವರು ಕೇವಲ ಒಣಹುಲ್ಲಿನ ಹಾಗೆ.
ಈ ಹಸಿರು ಹುಲ್ಲಿನ ಪರಿಯೇ ಬೇರೆ
ಅದು ಥೇಟ್ ನನ್ನಂತೆಯೇ.

# ಅರಗಿನ ಅರಮನೆ

ಮೂಲ : ಕಿಶ್ವರ್ ನಹೀದ್
ಅನು : ಬಿ. ಚಿನ್ನಸ್ವಾಮಿ

ನನ್ನ ಮದುವೆಗೆ ಮುನ್ನ
ನನ್ನವ್ವನಿಗೆ ದುಃಸ್ವಪ್ನಗಳು ಬೀಳುತ್ತಿದ್ದವು
ಅವಳ ಭಯಭೀತ ಚೀರಾಟದಿಂದ
ನಾನು ಕಂಪಿಸುತ್ತಿದ್ದೆ
ಎಚ್ಚರಿಸಿ 'ಏನಾಯಿತು?',
ಎಂದು ಕೇಳುತ್ತಿದ್ದೆ
ಕನಸುಗಳನ್ನು ನೆನೆಸಿಕೊಳ್ಳಲಾರದೆ ಅವಳು
ಬರಿಗಣ್ಣಿನಿಂದ ನನ್ನನ್ನು ದಿಟ್ಟಿಸುತ್ತಿದ್ದಳು.

ಒಂದು ದಿನ ಅಂಥದೇ ಒಂದು ದುಃಸ್ವಪ್ನ
ಕಂಡು ಅವಳು ಎಚ್ಚೆತ್ತಳು : ಆದರೆ ಚೀರಲಿಲ್ಲ
ಗಟ್ಟಿಯಾಗಿ ನನ್ನ ಅವುಚಿಕೊಂಡಳು, ಭಯದ ಮೌನದಲ್ಲಿ.
'ಏನಾಯಿತು?' ಎಂದೆ ನಾನು.
ಕಣ್ಣು ತೆರೆದು ದೇವಲೋಕಕ್ಕೆ ಕೈಮುಗಿದಳು.
'ನೀನು ಮುಳುಗುತ್ತಿರುವಂತೆ ಕನಸು ಕಂಡೆ;
ಉಳಿಸಲೆಂದು ನಾನು ನದಿಗೆ ಹಾರಿದೆ'
ಎಂದಳು
ಆ ರಾತ್ರಿ ಬಡಿದ ಸಿಡಿಲು
ನಮ್ಮ ಎಮ್ಮೆಯನ್ನೂ ನನ್ನ ಪ್ರಿಯಕರನನ್ನೂ ಕೊಂದಿತ್ತು.

ಒಂದು ರಾತ್ರಿ ನನ್ನವ್ವ ನಿದ್ದೆ ಹೋದಳು
ನಾನು ಎಚ್ಚರದಿಂದಿದ್ದೆ
ಅವಳು ಮುಷ್ಟಿಯನ್ನು ಸಡಿಲಿಸುವುದು ಬಿಗಿ ಹಿಡಿಯುವುದು ಮಾಡುತ್ತಿದ್ದಳ
ಏನನ್ನೋ ಹಿಡಿದುಕೊಳ್ಳಲು
ಸೋತು ಮತ್ತೆ ಹಿಡಿದುಕೊಳ್ಳಲು
ಛಲದಿಂದ ಪ್ರಯತ್ನಿಸುತ್ತಿರುವಂತೆ ತೋರುತ್ತಿತ್ತು

ನಾನು ಎಚ್ಚರಿಸಿದೆ, ಆದರೆ
ಆ ಕನಸು ಏನೆಂದು ಅವಳು ಬಾಯ್ಬಿಡಲಿಲ್ಲ.

ಅಂದಿನಿಂದ
ನನಗೆ ಸ್ವಸ್ಥ ನಿದ್ದೆಯಿಲ್ಲ
ಬೇರೆಯೇ ಕೋಣೆಗೆ ತೆರಳಿದೆ.

ಈಗ ನಾನು ಮತ್ತು ನನ್ನ ತಾಯಿ ಇಬ್ಬರೂ
ದುಃಸ್ವಪ್ನಗಳಿಂದ ಚೀರುತ್ತೇವೆ

ಯಾರಾದರೂ ಕೇಳಿದರೆ
ನಮ್ಮ ಕನಸುಗಳೇ ನೆನಪಾಗುವುದಿಲ್ಲ
ಎನ್ನುತ್ತೇವೆ.

●

## ನಾನು ಯಾರು?

ಮೂಲ : ಕಿಶ್ವರ್ ನಹೀದ್
ಅನು : ಪ್ರತಿಭಾ ನಂದಕುಮಾರ್

ಕಾಲುಚೀಲ ಶೂಗಳನ್ನು ಮಾರುವ
ಆ ಹೆಂಗಸಲ್ಲ ನಾನು

ಗಾಳಿಯಂತೆ ಮತ್ತೆ ನಿರ್ಭೀತಿಯಲ್ಲಿ ಸುಳಿದಾಡಲು ನೀವು
ಯಾರನ್ನು ಜೀವಂತ ಹೂಳಿದಿರೋ ಅವಳೆ ನಾನು
ಕಲ್ಲುಗಳೂ ಧ್ವನಿಯನ್ನು ಅದುಮಿಡಲಾರವೆಂದು
ತಿಳಿದಿಲ್ಲ ನಿಮಗೆ

ಸಂಪ್ರದಾಯಗಳ ಹೊರೆಯಡಿಯಲ್ಲಿ
ಯಾರನ್ನು ಅಡಗಿಸಿಡಬೇಕಾಯಿತೋ ಅವಳೆ ನಾನು
ದೀಪದ ಕುಡಿಗೆ ಗಾಢಾಂಧಕಾರದ ಭಯವಿಲ್ಲ ಎಂದು ತಿಳಿದಿಲ್ಲ ನಿಮಗೆ

ಯಾರ ಮಡಿಲಿನಿಂದ ಹೂಗಳನ್ನು ಕಿತ್ತು
ಬೆಂಕಿ ಮುಳ್ಳುಗಳನ್ನು ಸುರಿದಿರೋ ಅವಳೆ ನಾನು
ಸರಪಳಿಗಳು ಹೂವಿನ ಸುಗಂಧವನ್ನು
ಬಂಧಿಸಲಾರವೆಂದು ತಿಳಿದಿಲ್ಲ ನಿಮಗೆ

ಮರ್ಯಾದೆಯ ಹೆಸರಿನಲ್ಲಿ
ನೀವು ನನ್ನನ್ನು ಕೊಂದು ಮಾರಿದಿರಿ
ನಾಜೂಕು ಮಡಕೆ ಒಡಿದು ನದಿಯನ್ನೆದುರಿಸುವ
ಸೋಹ್ನಿ* ಸಾಯಲಾರಳೆಂದು ತಿಳಿದಿಲ್ಲ ನಿಮಗೆ

ಮದುವೆ ಮಾಡಿ ತೊಲಗಲೆಂದು ನೀವು
ಕಳಿಸಿಬಿಟ್ಟವಳು ನಾನು
ಮನಸ್ಸು ಗುಲಾಮವಾದಲ್ಲಿ ದೇಶ
ಉದ್ಧಾರವಾಗದೆಂದು ತಿಳಿದಿಲ್ಲ ನಿಮಗೆ

ತಾಯ್ತನ ಮತ್ತು ಪಾತಿವ್ರತ್ಯದ ವ್ಯಾಪಾರದಲ್ಲಿ
ನನ್ನ ನಾಚಿಕೆ ಮರ್ಯಾದೆಗಳಿಂದ
ಬಹಳ ದೀರ್ಘ ಕಾಲ ಲಾಭವಾಗಿದೆ ನಿಮಗೆ
ಈಗ ನಮ್ಮ ಮಡಿಲುಗಳಲ್ಲಿ ಮನಸ್ಸುಗಳಲ್ಲಿ
ಹೂವರಳುವ ಕಾಲ ಬಂದಿದೆ

ಪೋಸ್ಟರುಗಳಲ್ಲಿ ಅರೆನಗ್ನವಾಗಿ
ಕಾಲುಚೀಲ ಶೂ ಮಾರುವ
ಆ ಹೆಂಗಸಲ್ಲ ನಾನು

●

---

* ಸೋಹ್ನಿ - ಪಂಜಾಬಿನ ಪ್ರಸಿದ್ಧ ಕತೆ. ಪ್ರತಿ ರಾತ್ರಿ ಸುಟ್ಟ ಮಡಕೆಯನ್ನು ಹಿಡಿದು ಸೋಹ್ನಿ ನದಿ ದಾಟಿ ತನ್ನ ಪ್ರೇಮಿಯನ್ನು ಸಂಧಿಸುತ್ತಿದ್ದಳು. ಅವಳ ಅತ್ತಿಗೆ ಒಂದು ದಿನ ಸುಡದ ಮಡಕೆಯನ್ನು ಇಟ್ಟಿದ್ದರಿಂದ ಮುಳುಗಿ ಸತ್ತಳು.

# ಎರಡು ಪುಟ್ಟ ಕವಿತೆಗಳು

ಮೂಲ : ಇಶ್ರತ್ ಅಫ್ರೀನ್
ಅನು : ಪ್ರತಿಭಾ ನಂದಕುಮಾರ್

## ಅರ್ಪಣೆ

ನಾನು ನನ್ನ ತಂದೆಗಿಂತ
ಎತ್ತರ ಬೆಳೆದೆ
ನನ್ನ ತಾಯಿಯೇ
ಗೆದ್ದಳು.

## ನಾನು

ಈ ನಿರ್ದಯಿ ಹುಡುಗಿ
'ಅಹಂ'ನ ಜನಾಂಗಕ್ಕೆ ಸೇರಿದವಳು
ನಿಮ್ಮ ಸರಹದ್ದಿನ ಮಿತಿ ದಾಟಿ
ಎಲ್ಲೋ ದೂರದಲ್ಲಿ ವಾಸಿಸುತ್ತಾಳೆ.

# ರವೀಂದ್ರನಾಥ ಟ್ಯಾಗೋರ್ : ಒಂದು ಪುನರಾವಲೋಕನ

ಯು. ಆರ್. ಅನಂತಮೂರ್ತಿ

*ಖ್ಯಾತ ಭಾರತೀಯ ಇಂಗ್ಲಿಷ್ ಲೇಖಕ ಖುಷವಂತ್‌ಸಿಂಗ್ ಅವರು ರವೀಂದ್ರನಾಥ ಟ್ಯಾಗೋರ್ ಇಂದು ಎಷ್ಟು ಪ್ರಸ್ತುತ ಎಂಬ ಪ್ರಶ್ನೆಯೊಂದನ್ನು ಎತ್ತಿದರು. ಸಾಹಿತ್ಯಕ ಹಾಗೂ ಅಸಾಹಿತ್ಯಕ ವಿವಾದಗಳೆರಡಕ್ಕೂ ಕಾರಣವಾದ ಈ ಪ್ರಶ್ನೆಗೆ ಗಂಭೀರವಾಗಿ ಪ್ರತಿಕ್ರಿಯಿಸುವುದರ ಮೂಲಕ ಕನ್ನಡದ ಮುಖ್ಯ ಲೇಖಕರಲ್ಲೊಬ್ಬರಾದ ಯು. ಆರ್. ಅನಂತಮೂರ್ತಿಯವರು ಟ್ಯಾಗೋರರ ಸಾಂಸ್ಕೃತಿಕ ಮಹತ್ವ ಕುರಿತು ಇಲ್ಲಿ ಮಾತಾಡಿದ್ದಾರೆ.*

ಟ್ಯಾಗೋರ್ ಬಗ್ಗೆ ಖುಷವಂತ್‌ಸಿಂಗ್ ತಮ್ಮ ಸಹಜವಾದ ತುಂಟತನದಿಂದ ಮಾತಾಡಿದ್ದರೆ, ಅದನ್ನು ನಾವು ತೀರಾ ಗಂಭೀರವಾಗಿ ತೆಗೆದುಕೊಳ್ಳಬೇಕಾಗಿಲ್ಲ. ಖುಷವಂತ್‌ಸಿಂಗ್‌ಗೆ ಸುದ್ದಿಯಾಗುವುದು ಬಹಳ ಮುಖ್ಯ. ಸುದ್ದಿ ಆಗಿಯೂ ಬಿಟ್ಟರು. ಆಮೇಲೆ ಅವರು ಹೇಳಿದ ಮಾತನ್ನು ತೀರಾ ಗಂಭೀರವಾಗಿ ಪರಿಗಣಿಸಿ ಕೆಲವರು ಕೂಗಾಡಿದರು. ಹಾಗೆ ಕೂಗಾಡುವುದರಲ್ಲಿ ನನಗೆ ನಂಬಿಕೆಯಿಲ್ಲ. ಆದ್ದರಿಂದ ಈ ವಿವಾದಕ್ಕೆ ಸಂಬಂಧಿಸಿದ ಹಾಗೆ ಪೂರ್ವಭಾವಿಯಾಗಿ ಕೆಲವು ತಾತ್ವಿಕವಾದ ವಿಷಯಗಳನ್ನು ಕುರಿತು ಮೊದಲು ಮಾತಾಡುತ್ತೇನೆ.

ನಾವೆಲ್ಲಾ ಭಾರತೀಯರು ಒಂದು ಭಾಷಾವಲಯದಲ್ಲಿ ಬದುಕುತ್ತಿದ್ದೇವೆ ಎಂದು ನನ್ನ ನಂಬಿಕೆ. ಒಂದು ಭಾಷಾವಲಯ ಅಂದರೆ... ಉದಾಹರಣೆಗೆ, ಆಗ ಪ್ರಾಯಶಃ ಕಾಳಿದಾಸನಿಗೆ ಸಂಸ್ಕೃತವೂ ಇತ್ತು. ಹಾಗೇ ಅವನ ಸುತ್ತಮುತ್ತ ಆಡುವ ಭಾಷೆಯೂ ಇತ್ತು. ಆದರೆ ಅವನು ಬರೆಯ ಹೊರಟಾಗ ಸಂಸ್ಕೃತವನ್ನು ಆಯ್ಕೆ ಮಾಡುತ್ತಾನೆ. ಒಂದು ಭಾಷೆಯನ್ನು ಆರಿಸಿಕೊಂಡಾಗ ಆ ಭಾಷೆಯಲ್ಲೇ ಇರುವ ಒಂದು ಸಾಹಿತ್ಯದ ಪರಂಪರೆಯನ್ನೂ ಆಯ್ದಿರುತ್ತೀವಿ. ಅದರ ಒಳಗೇ ನಮ್ಮ ಮನಸ್ಸು ಹೆಚ್ಚು ಸುಗಮವಾಗಿ ಕೆಲಸ ಮಾಡುತ್ತದೆ

ಎಂದು ತಿಳಿದು ನಾವು ಆ ಭಾಷೆಯನ್ನು ಆಯ್ಕೆ ಮಾಡಿರುತ್ತೀವಿ. ಈಗ ನಮ್ಮಲ್ಲಿ ಬಹಳ ಭಾರತೀಯರಿಗೆ ನಮ್ಮದೇ ಆದ ದೇಶಭಾಷೆ ಇದೆ. ಈಗ ನನಗೆ ಕನ್ನಡ ಇರುತ್ತೆ. ಹಾಗೆಯೇ ಪ್ರಾಯಶಃ ನಾನು ತಮಿಳು ಮಾತಾಡುವವನಾಗಿದ್ದರೆ ಮನೆಯಲ್ಲಿ ತಮಿಳು ಇರುತ್ತೆ. ನನ್ನ ಬೀದಿಯ ಭಾಷೆಯಾಗಿ ಕನ್ನಡ ಇರುತ್ತೆ. ಮತ್ತೆ ಇಂಗ್ಲಿಷೂ ಇರುತ್ತೆ. ಕನ್ನಡದಲ್ಲಿ ನಾನು ಬರಿತೀನಿ ಅಂತ ಹೊರಟಾಗ ಕನ್ನಡದ ಪರಂಪರೆಯನ್ನೂ ನಾನು ಸ್ವೀಕರಿಸಿರ್ತೀನಿ. ಪಂಪ, ಕುಮಾರವ್ಯಾಸ, ವಚನಕಾರರು, ಆಮೇಲೆ ಇತ್ತೀಚಿನ ಬರವಣಿಗೆಯಲ್ಲಿರುವ ನಮ್ಮ ದೇಶದ ರಾಜಕೀಯಕ್ಕೆ, ನಮ್ಮ ಸಾಂಸ್ಕೃತಿಕ ಹೋರಾಟಗಳಿಗೆ ತೆರೆದ ಮನಸ್ಸು ಇತ್ಯಾದಿಗಳನ್ನೆಲ್ಲ ನಾನು ಆಯ್ದಿರುತ್ತೀನಿ. ಅಂದರೆ ಬರೆಯುವಾಗ ಅದರ ಒಳಗೆ ನಾನು ಬರಿತೀನಿ. ಈಗ ಒಬ್ಬ ತಮಿಳಿನಲ್ಲಿ ಬರೆಯಲಿಕ್ಕೆ ಹೊರಟರೆ ಡಿ. ಎಂ. ಕೆ., ರಾಮಸ್ವಾಮಿ ನಾಯ್ಕರ್ ಮಾಡಿದ ಚಳುವಳಿಗಳ ಜೊತೆಗೇ ಅವನ ಪ್ರಾಚೀನ ಸಾಹಿತ್ಯ ಕೂಡಾ ಇರುತ್ತೆ.

ಆದರೆ ಕೆಲವರು ಇಂಗ್ಲಿಷನ್ನು ಆಯ್ದುಬಿಡ್ತಾರೆ. ಆ ಆಯ್ಕೆ ಕೇವಲ ಭಾಷೆಯ ಮಟ್ಟಿಗೇ ಅಂತ ಅಲ್ಲ. ಭಾಷೆಯ ಕಾರಣವೂ ಇದೆ, ನಿಜ. ಅಂದರೆ, ಅದರಿಂದ ಹೆಚ್ಚು ಪ್ರಚಾರ ಸಿಗುತ್ತೆ, ಹೆಚ್ಚಿನ ಓದುಗರು ಎಲ್ಲ ಕಡೆ ಸಿಗುತ್ತಾರೆ, ನನ್ನ ಒಂದೇ ಪ್ರಾಂತ್ಯದಲ್ಲಿ ಅಲ್ಲದೇ ಬೇರೆ ಕಡೆಯೂ ಓದುಗರಿರುತ್ತಾರೆ, ಅದು ಅಂತರರಾಷ್ಟ್ರೀಯ ಭಾಷೆ..... ಇತ್ಯಾದಿ ಆಕರ್ಷಣೆಗಳೂ ಈ ಆಯ್ಕೆಯ ಹಿಂದಿರುತ್ತವೆ. ಇದರ ಜೊತೆಗೇ ಇಂಗ್ಲಿಷಿಗೆ ಒಂದು ಆಧುನಿಕತೆ ಇದೆ ಅನ್ನೋದೂ ಈ ಆಯ್ಕೆಗೆ ಕಾರಣವಾಗಿದೆ. ಆ ಆಧುನಿಕತೆ ಎನ್ನುವುದನ್ನು ನಾನು 'modern' ಎಂಬ ಅರ್ಥದಲ್ಲಿ ಹೇಳಿದ್ದು. ಅದಕ್ಕಿರುವ ಆಧುನಿಕತೆ ಇದೆಯಲ್ಲ ಅದರ ಒಳಗೆ ಬರೆಯೋವಾಗ ಏನಾಗುತ್ತದೆ ಎಂಬುದನ್ನು ಗಮನಿಸಬೇಕು. ತಮಿಳುನಾಡಿನಲ್ಲಿರುವ ಒಬ್ಬ ಇಂಗ್ಲಿಷ್‌ನಲ್ಲಿ ಬರೆಯೋದಾದ್ರೆ ಅವನು ದ್ರಾವಿಡ ಮುನ್ನೇತ್ರ ಕಳಗಂ, ರಾಮಸ್ವಾಮಿ ನಾಯ್ಕರ್ ಹಾಗೂ ಅದಕ್ಕೆ ವಿರೋಧವಾಗಿ ಬಂದ ರಾಜಾಜಿ, ಮತ್ತು ತಮಿಳುನಾಡಿಗೆ ಸಹಜವಾದ ಅನೇಕ ಆಸಕ್ತಿಗಳು ಇವನ್ನೆಲ್ಲ ಮರೆತು ಬರೆಯಲಿಕ್ಕೆ ಸಾಧ್ಯ. ಅಂದರೆ ಒಂದು ಭಾಷೆಯನ್ನು ಆಯುವಾಗ ಆ ಭಾಷೆಯ ಒಳಗಡೆಯೇ ಇರುವ ಒಂದು ಪರಂಪರೆಯನ್ನು ಆಯ್ದುಕೊಳ್ಳಬೇಕಾಗಿ ಬರುತ್ತದೆ. ಖುಷವಂತ್‌ಸಿಂಗ್ ಅಂಥಹವರು ಇಂಗ್ಲಿಷನ್ನು ಆಯ್ದವರು. ಅವರು ಇಂಗ್ಲಿಷನ್ನು ಆಯ್ದರು ಅಂದ ತಕ್ಷಣ ಇವತ್ತು ಇಂಗ್ಲಿಷಿನಲ್ಲಿರುವ ಅತ್ಯಂತ ಪ್ರಭಾವಶಾಲಿಯಾದ ಪರಂಪರೆ ಯಾವುದು ಅನ್ನುವುದನ್ನೂ ನೋಡಬೇಕು. ಆ ಪರಂಪರೆಯಲ್ಲಿ ಇವತ್ತು ಪ್ರಭಾವಶಾಲಿಯಾಗಿರುವುದು ಶೇಕ್ಸ್‌ಪಿಯರ್, ವರ್ಡ್ಸ್‌ವರ್ತ್ ಅಥವಾ ಕೀಟ್ಸ್ ಅಲ್ಲ, ಅಥವಾ ನಾವು ಇಂಗ್ಲಿಷ್ ಸಾಹಿತ್ಯವನ್ನು ಅತ್ಯಂತ ಗಂಭೀರವಾಗಿ ತೆಗೆದುಕೊಳ್ಳಲಿಕ್ಕೆ ಕಾರಣರಾದ ಮಿಲ್ಟನ್ ಇತ್ಯಾದಿಗಳೂ ಅಲ್ಲ. ಈಗ ಇಂಗ್ಲಿಷ್‌ನಲ್ಲಿ ಚಾಲ್ತಿಯಲ್ಲಿರುವ, ಮತ್ತು ಒಬ್ಬ ಇಂಗ್ಲಿಷ್‌ನಲ್ಲಿ ಬರೆಯುವ ಲೇಖಕನನ್ನು ಮೇಲಕ್ಕೆ ತರುವ ಒಂದು ಪರಂಪರೆ ಅಂದರೆ ಅಲ್ಲಿ ಇರುವ ದ್ವಿತೀಯ ದರ್ಜೆಯ, ಮನಸ್ಸನ್ನು

ಕೂಡಲೆ ಉಲ್ಲಾಸಗೊಳಿಸಬಲ್ಲ, ಆಮೋದಗೊಳಿಸಬಲ್ಲ, ಚುರುಕುಗೊಳಿಸಬಲ್ಲ, ಅತ್ಯಾಧುನಿಕವಾದ ಈ ಯುಗದ ಸರಕುಗಳು. ಅವು ಏನನ್ನು ಬಳಸಿ ಪ್ರಚೋದಿಸುತ್ತವೆ ಅಂದರೆ ಇವತ್ತು ನಮಗೆ ನಮ್ಮ ನಿತ್ಯ ಜೀವನದಲ್ಲಿ ದೊರಕುತ್ತಿರುವ ಸರಕು ಸಂಸ್ಕೃತಿ ಅಂತೀವಲ್ಲ, ಆ ಸರಕು ಸಂಸ್ಕೃತಿಯಿಂದ ಉತ್ತೇಜಿತವಾದ sensuousness ಅನ್ನು ಬಳಸುತ್ತಿರುತ್ತವೆ. ಆ sensuousnessಗೆ ಕೂಡಲೇ ನಮ್ಮ ಇಂದ್ರಿಯಗಳನ್ನು ಉದ್ರೇಕಗೊಳಿಸಬಲ್ಲ ಶಕ್ತಿ ಇರುತ್ತೆ. ಅದು ಥಟ್ಟನೆ ಹೊಳೆಯುವಂಥ ಶಕ್ತಿಯಾಗಿರುತ್ತೆ. ಆದ್ದರಿಂದ ಅದು ಎಲ್ಲದಕ್ಕಿಂತ ಹೆಚ್ಚು ಕಾಮ ಪ್ರಚೋದಕವಾಗಿರುತ್ತೆ; ದೃಷ್ಟಿ ಪ್ರಚೋದಕವಾಗಿರುತ್ತೆ.

ಇವತ್ತು ಇಂಗ್ಲಿಷ್ ಈ ಸರಕು ಸಂಸ್ಕೃತಿಗಳನ್ನು ಇಲ್ಲಿ ಕೂಡಲೇ ಒಳಕ್ಕೆ ತರಬಹುದಾದಂತಹ ಭಾಷೆ ಆಗಿಬಿಟ್ಟಿದೆ. ಇವತ್ತಿಗೂ ಇಂಗ್ಲಿಷಿನಲ್ಲಿರುವ ಶೇಕ್ಸ್‌ಪಿಯರ್ ಆಗಲಿ, ಮಿಲ್ಟನ್ ಆಗಲಿ ಅಥವಾ ವರ್ಡ್ಸ್‌ವರ್ತ್ ಆಗಲಿ ಅತ್ಯಂತ ಆಪ್ತವಾಗಿ ಒಳಗೆ ಬರ್‍ತಾ ಇರೋದು ಭಾರತೀಯ ಭಾಷೆಯಲ್ಲೇ ಹೊರತು, ಇಂಗ್ಲಿಷ್‌ನಲ್ಲಲ್ಲ. ಈಗ ವರ್ಡ್ಸ್‌ವರ್ತ್ ಕುವೆಂಪುವಿಗೆ ಹತ್ತಿರವಾದಷ್ಟು, ಕುವೆಂಪುವಿನ ಸಮಕಾಲೀನನಾದ ಒಬ್ಬ ಇಂಗ್ಲಿಷ್ ಲೇಖಕನಿಗೆ ಆಗಿಲ್ಲ. ಕುವೆಂಪು ಅಂಥವರಿಗೆ ಮಿಲ್ಟನ್ ಮುಖ್ಯ ಆದಷ್ಟು ಇನ್ನೊಬ್ಬ ಇಂಗ್ಲಿಷ್ ಲೇಖಕನಿಗೆ ಆಗ್ಲಿಲ್ಲ. ಇಂಗ್ಲಿಷ್ ಭಾಷೆಯಲ್ಲಿರುವ ಅತ್ಯಂತ ಗಾಢವಾದದ್ದು ಇವತ್ತು immediate ಅಂತ ಅನಿಸೋದು ಭಾರತೀಯ ಭಾಷೆಗಳಲ್ಲೇ ಹೊರತು ಇಂಗ್ಲಿಷ್ ಭಾಷೆಯಲ್ಲಲ್ಲ. ಇಂಗ್ಲಿಷ್ ಭಾಷೆಯಲ್ಲಿ ಇವತ್ತು ಮುಖ್ಯವಾಗಿರೋದು ಅಲ್ಲಿ ಬಂದಿರುವ ಪತ್ತೇದಾರಿ ಕಾದಂಬರಿಗಳು, ರೊಮಾನ್ಸ್‌ಗಳು, ಸಿನಿಮಾಕ್ಕಾಗಿ ಬರೆದಂತಹ ಕೃತಿಗಳು, ಆಮೇಲೆ ಐದೈದು ವರ್ಷಕ್ಕೆ ಫ್ಯಾಷನ್ ಆಗಿ ಹೋಗುವಂಥವುಗಳು ಇಷ್ಟೇ. ಇವತ್ತು ಇಂಗ್ಲಿಷಿನ ಸಾಹಿತ್ಯ ಚರಿತ್ರೆ ಹೇಗಿದೆ ಅಂದರೆ ಅದನ್ನು ದಶಕಗಳ ಮಟ್ಟಿಗಷ್ಟೇ ಯೋಚನೆ ಮಾಡೋಕೆ ಸಾಧ್ಯ; ಶತಕಗಳಲ್ಲಿ ಯೋಚನೆ ಮಾಡೋಕ್ಕೇ ಆಗಲ್ಲ. ದಶಕಗಳಲ್ಲಿ ಅಂದರೆ, ಐವತ್ತರ ದಶಕ, ಅರವತ್ತರ ದಶಕ, ಎಪ್ಪತ್ತರ ದಶಕ.... ಹೀಗೆ ಯೋಚನೆ ಮಾಡಬೇಕಾಗಿ ಬಂದಿದೆ. ಅದಕ್ಕೆ ಸದ್ಯೋಜಾತವಾದ ಗುಣವೂ ಇದೆ. ಅದೇನು ಸಂಪೂರ್ಣ ಅವಗುಣ ಅಂತ ನಾನು ಹೇಳ್ತಾ ಇಲ್ಲ. ಅದಕ್ಕೆ ಮನಸ್ಸನ್ನು ಪ್ರಚೋದಿಸುವ ಶಕ್ತಿ ಅಗಾಧವಾಗಿದೆ. ಆದರೆ ಅದು ತನ್ನ ಸ್ಮೃತಿಗಳನ್ನು ಕಳೆದುಕೊಂಡಂತಾಗಿದೆ. ಅದರಲ್ಲೂ ಒಬ್ಬ ಫಾಕ್ನರ್ ಅಂಥವನು ಇದ್ದಾನೆ. ಆದರೆ ಇವತ್ತು ಅವನು ಮುಖ್ಯ ಆಗೋದಿಲ್ಲ. ಇಂಗ್ಲಿಷಿನಲ್ಲಿ ಇವತ್ತು ನಡೆಯುತ್ತಿರುವುದಕ್ಕೆ, ಪ್ರಚಲಿತವಾಗಿರುವುದಕ್ಕೆ, ಅಥವಾ ಇವತ್ತು ಬರೆಯುತ್ತಿರುವ ಒಬ್ಬ ಇಂಡಿಯದ ಇಂಗ್ಲಿಷ್ ಲೇಖಕರಿಗೆ ಅವನಲ್ಲ ಮುಖ್ಯವಾಗಿರೋದು. ಇವತ್ತು ತಮಿಳಿನಲ್ಲಿ ಬರೆಯುವ ಒಬ್ಬ ಲೇಖಕನಿಗೆ ಫಾಕ್ನರ್ ಮುಖ್ಯವಾಗಿ ಕಾಣಬಹುದು; ಆದರೆ ಈ ಇಂಗ್ಲಿಷ್ ಲೇಖಕರಿಗಲ್ಲ.

ಖುಷವಂತ್‌ಸಿಂಗ್ ಈ ರೀತಿಯ ಒಂದು ಸಂಪ್ರದಾಯದಿಂದ, ಪರಂಪರೆಯಿಂದ, ಬಂದವರಾದ್ದರಿಂದ ಅವರಿಗೆ ಖಂಡಿತ ಟ್ಯಾಗೋರ್ ಮುಖ್ಯ ಅಂತ ಅನಿಸಲ್ಲ. ಆದರೆ ಈ ಘಟ್ಟದಲ್ಲಿ ಖುಷವಂತ್‌ಸಿಂಗ್ ಏನು ಹೇಳಿದ್ದಾರೆ ಅದು ಈಗ ಲಿಬರಲೈಸೇಷನ್ ಯುಗದಲ್ಲಿ ಜಾಗತೀಕರಣವಾಗುತ್ತಿರುವ ಇಂಡಿಯಾದಲ್ಲಿ ಬಹಳ ಜನರಿಗೆ ಅನ್ನಿಸಬಹುದಾದ ವಿಷಯ. ಅಂಥವರಿಗೆ ಕುವೆಂಪು ಅಂದರೆ ಬೋರ್, ಬೇಂದ್ರೆ ಅಂದರೆ ಬೋರ್, ಪು. ತಿ. ನ. ಅಂದರೆ ಬೋರ್, ಪ್ರೇಮ್‌ಚಂದ್ ಅಂದರೆ ಬೋರ್, ಟಾಲ್‌ಸ್ಟಾಯ್ ಅಂದರೆ ಬೋರ್, ಹಾಗೇನೇ ದಾಸ್ತೋವಸ್ಕಿ ಅಂದರೆ ಬೋರ್. ಹೀಗೆ ಇವರೆಲ್ಲ ಬೋರ್ ಅನ್ನುವ ಒಂದು ಸಾಹಿತ್ಯದ ಜಗತ್ತಿದೆ. ಅವರು ಒಂದು ದೃಷ್ಟಿಯಲ್ಲಿ ಅಕ್ಷರ ಶತ್ರುಗಳು. ಏಕೆಂದರೆ ಅವರು ಸಾಹಿತ್ಯವನ್ನು ಬಳಸುತ್ತಾರೆ, ನಿಜ. ಆದರೆ ಅವರಿಗೆ ಎಲೆಕ್ಟ್ರಾನಿಕ್ ಮಾಧ್ಯಮವನ್ನೂ ಬಳಸುವ ಸಾಮರ್ಥ್ಯ ಇದ್ದಿದ್ದರೆ ಪ್ರಾಯಶಃ ಅವರು ಅದನ್ನೇ ಬಳಸ್ತಾ ಇದ್ದರು. ಅವರಿಗೆ ಭಾಷೆ ಅನ್ನುವುದು ಅಂತಹ ಅಗತ್ಯ ಅಲ್ಲ. ಭಾಷೆ ಅನ್ನೋದು ಅಂಥವರಿಗೆ ಒಂದು ತೆಳುವಾದ ಅಗತ್ಯ. ಅದು ಮನಸ್ಸಿನಲ್ಲಿ ಕೆಲವು ಭಾವನೆಗಳನ್ನು ಪ್ರಚೋದಿಸಿ ಹೋಗುವಂಥದ್ದು.

ಆದರೆ ನಮ್ಮಂಥ ಕೆಲವರಿಗೆ ಭಾಷೆ ಅನ್ನೋದು ವಿಚಿತ್ರ ರೀತಿಯ ಪ್ರೀತಿಯ ವಸ್ತುವಾಗಿರುತ್ತೆ. ಅದು ಏನನ್ನ ಹೇಳುತ್ತೋ ಅದರ ಮಟ್ಟಿಗಷ್ಟೇ ನಾವು ಗಮನ ಕೊಡದೇ ಆ ಶಬ್ದಗಳಲ್ಲೇ ಒಂದು ಬಗೆಯ ರುಚಿಯನ್ನು ನಾವು ಕಾಣುತ್ತಿರುತ್ತೀವಿ. ಶಬ್ದ ತಾನಾಗಿ ತನ್ನಲ್ಲೇ ರುಚಿಸುತ್ತಾ ತಾನು ಹೇಳೋದನ್ನೂ ರುಚಿಯಾಗಿ ಮಾಡುವ ಒಂದು ಕ್ರಿಯೆಯನ್ನು ನೀವು ಕಾವ್ಯ ಅಂತ ಅನ್ನಬಹುದು. ಅಂದರೆ ಆಗ ಭಾಷೆ ಹೇಳುವುದು ಮಾತ್ರ ನಮಗೆ ಕಾಣುತ್ತಾ ಇರುವುದಿಲ್ಲ; ಭಾಷೆಯೂ ನಮಗೆ ಕಾಣ್ತಾ ಇರುತ್ತೆ. ಭಾಷೆ ಕಾಣ್ತಾ ಇರೋದ್ರಿಂದನೇ ಅದು ಹೆಚ್ಚು ಹೇಳ್ತಾ ಇದೆ ಅನ್ಸುತ್ತೆ. ಈ ರೀತಿಯ ಮನಸ್ಸಿದೆಯಲ್ಲ ಅದು ಪ್ರಾಯಶಃ ಅಷ್ಟು ಬೆಲೆಯುಳ್ಳದ್ದು ಎಂದು ಈ ಆಧುನಿಕ ಸರಕು ಸಂಸ್ಕೃತಿಯ ಜಗತ್ತು ತಿಳಿದಿಲ್ಲ. ಖುಷವಂತ್‌ಸಿಂಗರನ್ನು ವಿರೋಧಿಸುವಾಗ ಒಂದು ಇಡೀ ಗ್ರಹಿಕೆಯ ಕ್ರಮವನ್ನೇ ಅದು ಸಾಹಿತ್ಯದಿಂದ ಬಯಸುವ ಅಂಶಗಳ ಹಿಂದಿರುವ ಒಂದು ತತ್ವವನ್ನೇ ನಾವು ವಿರೋಧಿಸುತ್ತಾ ಇರ್‍ತೀವಿ.

ಇವತ್ತು ಹಾಗೆ ಇಡೀ ಜಗತ್ತಿನ ರುಚಿಗೆ ಸಲ್ಲಬಲ್ಲಂಥದ್ದನ್ನು ಸೃಷ್ಟಿಸುವ ಶಕ್ತಿ ಭಾರತೀಯನಿಗೆ ಬಂದಿದೆ. ಯಾಕೆಂದರೆ ಇಂಗ್ಲಿಷ್ ಈಗ ನಮ್ಮ ಜೊತೆಗಿರುವ ಭಾಷೆ. ಯಾರ್‍ಯಾರು ಈ ಭಾರತೀಯವಾದ ಒಂದು ಗೊಡ್ಡಾದ ಸಂಪ್ರದಾಯದಿಂದ ದೂರವಾಗ್ತಾನೋ ಅವನು ಇಂಗ್ಲಿಷಿಗೆ ಹತ್ತಿರವಾಗ್ತಾನೆ. ನಮ್ಮ ಆಲೋಚನಾ ಕ್ರಮಗಳಿಂದ ದೂರವಾದವನು ಇಂಗ್ಲಿಷಿಗೆ ಹತ್ತಿರವಾಗ್ತಾನೆ. ನಮ್ಮ ನಿತ್ಯದ ಅಡಿಗೆಯ ರುಚಿಗಳು ಇತ್ಯಾದಿಗಳಿಂದ ಬೇಸತ್ತವನು ಇಂಗ್ಲಿಷಿಗೆ ಹತ್ತಿರವಾಗ್ತಾನೆ. ನಮ್ಮ ಪರಂಪರಾನುಗತವಾದ ವೇಷ ಭೂಷಣಗಳಿಂದ ದೂರವಾದವನು ಇಂಗ್ಲಿಷಿಗೆ ಹತ್ತಿರವಾಗ್ತಾನೆ. ಹೀಗೆ ಇಂಗ್ಲಿಷ್ ಅನ್ನೋದು

ಆ ದೃಷ್ಟಿಯಿಂದ ಒಂದು ಪೊಲಿಟಿಕಲ್ ಪಾರ್ಟಿ ಇದ್ದ ಹಾಗೆ. ಅದರಲ್ಲಿ ಕ್ರಾಂತಿಕಾರನಾದವನೂ ಇಂಗ್ಲಿಷ್‌ಗೆ ಹತ್ತಿರದವನಾಗಬಹುದು. ನಮ್ಮದೆಲ್ಲವನ್ನೂ ತೊಡೆದು ಹಾಕಿಬಿಡಬೇಕು ಅನ್ನುವವನು ಕೂಡ ಇಂಗ್ಲಿಷ್‌ಗೆ ಹತ್ತಿರ ಆಗ್ತಾನೆ. ನಮ್ಮ ಮಕ್ಕಳೂ ಇವತ್ತು ಕಲಿತುಕೊಳ್ತಾ ಇರೋದು ಇಂಗ್ಲಿಷ್. ಅತ್ಯಾಧುನಿಕವಾದ ನಮ್ಮ ಲೇಖಕರ ಮಕ್ಕಳಿಗೆ ಇಂಗ್ಲಿಷ್ ಬರುತ್ತದೆಯೇ ಹೊರತು ಕನ್ನಡ ಬರಲ್ಲ.

ಇವತ್ತು ಇವೆಲ್ಲದಕ್ಕೂ ವಿರೋಧವಾಗಿ ಇಂಡಿಯಾದಲ್ಲಿ ಮೊದಲು ಕಾಣಿಸಿಕೊಂಡ ಒಂದು ದೊಡ್ಡ ಶಕ್ತಿ ಟ್ಯಾಗೋರ್. ಯಾಕೆಂದರೆ ಅವರು ಬಂಗಾಳಿಯಲ್ಲಿ ಬರಿತೀನಿ ಅಂದ್ರು. ಕನ್ನಡದ ಹಾಗೆ, ತಮಿಳಿನ ಹಾಗೆ, ತೆಲುಗಿನ ಹಾಗೆ ಒಂದು ಭಾರತೀಯ ಭಾಷೆಯನ್ನು ಆರಿಸಿಕೊಂಡರು. ಅಂದರೆ, ಎಲ್ಲ ಭಾಷೆಗಳ ಹಾಗಿರುವ ಇನ್ನೊಂದು ಭಾಷೆಯಲ್ಲಿ ಬಹಳ ದೊಡ್ಡ ಕೃತಿಯನ್ನು ಸೃಷ್ಟಿಸುತ್ತೀನಿ, ಇಡೀ ಇಂಡಿಯಾದ ಮನಸ್ಸನ್ನ ನಾನು ಹಿಡಿತೀನಿ ಅಂತ ಬರೆದರು. ಆಗ ಒಂದು ವಿಚಿತ್ರವಾದ ಸಂಗತಿ ನಡೆಯಿತು. ಇವತ್ತಿಗೂ ಭಾರತದಲ್ಲಿ ವೇದವ್ಯಾಸರನ್ನ ಅಥವಾ ವಾಲ್ಮೀಕಿಯನ್ನ ಬಿಟ್ಟರೆ (ಅವರಿಬ್ಬರೂ ಎರಡು ಭಾಷೆಗಳಿದ್ದಂತೆ. ವೇದವ್ಯಾಸ ಮತ್ತು ವಾಲ್ಮೀಕಿ ಇಡೀ ಇಂಡಿಯಾದ ಎರಡು ಭಾಷೆಗಳು ಅನ್ನಿಸುತ್ತೆ) ಒಂದು ಭಾರತೀಯ ಭಾಷೆಯಲ್ಲಿ ಇಡೀ ಇಂಡಿಯಾಕ್ಕೆ ಮಾದರಿಯಾದ ಒಬ್ಬ ಕವಿ ಬಂದಿರೋದು ಅಂದರೆ ಟ್ಯಾಗೋರ್ ಒಬ್ಬರೇ. ಕಾಳಿದಾಸನ ನಂತರ ಇನ್ನೊಬ್ಬ ಸಾಹಿತ್ಯ ಪುರುಷ ಇಂಡಿಯಾದಲ್ಲಿ ಕಂಡದ್ದು ಟ್ಯಾಗೋರ್‌ರಲ್ಲಿ. ಟ್ಯಾಗೋರ್ ಕುವೆಂಪುವಿಗೆ ಮಾದರಿಯಾದರೆ, ಟ್ಯಾಗೋರರ ಮೇಲೆ ಬೇಂದ್ರೆ ಒಂದು ಪದ್ಯ ಬರೆದರು. ಕುವೆಂಪುಗಂತೂ ಟ್ಯಾಗೋರ್ ಅವರೇ ಮಾದರಿಯಾಗಿರೋದು ಅನ್ಸುತ್ತೆ. ಅವರು ತಮ್ಮ ಭಾಷೆಯನ್ನು ಅಷ್ಟು ಸಂಸ್ಕೃತಗೊಳಿಸಿದ್ದರ ಹಿಂದೆ ಒಂದು ಟ್ಯಾಗೋರ್ ಮಾದರಿ ಇದೆ ಅಂತ ನನಗೆ ಅನಿಸುತ್ತೆ. ನೀವು ಇಂಡಿಯಾದಲ್ಲಿ ಎಲ್ಲೇ ನೋಡಿ ಈ ಟ್ಯಾಗೋರ್‌ರಿಂದ ಹೊಸ ಕಾಲದ ಸಾಹಿತ್ಯ ಹುಟ್ಟಿಕೊಳ್ಳುತ್ತೆ.

ಹಿಂದೆ ಸಂಸ್ಕೃತದಲ್ಲಿ ಒಬ್ಬ ಸಾಹಿತ್ಯ ಪುರುಷ ಇರುತ್ತಿದ್ದ. ಅಂದರೆ, ಸಾಹಿತ್ಯೋದ್ಯೋಗವನ್ನು, ಲೇಖನೋದ್ಯೋಗವನ್ನು ಉಳಿದವರಿಗೆ ಮಾದರಿಯಾಗುವಂತೆ ಮಾಡುವವನೊಬ್ಬನಿದ್ದ. ಅಂದರೆ, ಉಳಿದ ಆಸಕ್ತಿಯನ್ನೆಲ್ಲಾ ಇಟ್ಟುಕೊಂಡು ಲೇಖನೋದ್ಯೋಗ ಮಾಡೋದು ಇದೆಯಲ್ಲ, ಈ ದೃಷ್ಟಿಯಿಂದ ಕಾಳಿದಾಸನ ನಂತರ ನಮಗಿರುವ ಮಾದರಿ ಟ್ಯಾಗೋರರದು. ಅದಕ್ಕೆ ಅವರು 'ಗೋರಾ' ಅನ್ನುವ ಕಾದಂಬರಿಯನ್ನು ಬರೆದರು. ನನಗೆ 'ಗೋರಾ' ಕಾದಂಬರಿ ಒಂದು ದೃಷ್ಟಿಯಿಂದ ಥಾಮಸ್‌ಮನ್ನಿನ The Magic Mountain ಹಾಗೆ. ನನ್ನ ಪ್ರಕಾರ ಇವತ್ತಿಗೂ ಇಂಡಿಯಾದಲ್ಲಿ - ಅದರಲ್ಲೂ ಡಿಸೆಂಬರ್ ಆರರ ನಂತರ ಓದಿ ಅರ್ಥ ಮಾಡಿಕೊಳ್ಳಬೇಕಾದ ಮುಖ್ಯ ಕೃತಿಗಳಲ್ಲಿ ಒಂದು ಟ್ಯಾಗೋರ್‌ರವರ 'ಗೋರಾ' ಕೃತಿ. ಇವರು ಸಾಹಿತ್ಯ ಪುರುಷ ಅಂದ್ರೆ ಇವರೊಬ್ಬ ಅತ್ಯುತ್ತಮ

ಸಾಹಿತಿ ಅಂತ ನಾನು ಹೇಳ್ತಾ ಇಲ್ಲ. ಅವರಿಗಿಂತ ಒಳ್ಳೆ ಕಾದಂಬರಿಕಾರರಿದ್ದಾರೆ, ನಮ್ಮ ಬೇಂದ್ರೆ ಟ್ಯಾಗೋರ್‌ಗಿಂತ ಒಳ್ಳೆಯ ಕವಿ. ಆ ಅರ್ಥದಲ್ಲಿ ಸಾಹಿತ್ಯ ಪುರುಷ ಅಂತ ಅಲ್ಲ. ಸಾಹಿತ್ಯೋದ್ಯೋಗವನ್ನು ಒಂದು ಕೇಂದ್ರವಾಗಿ ಮಾಡಿದಂತಹ ಒಬ್ಬ ಮನುಷ್ಯ ಟ್ಯಾಗೋರ್. ಅದು ಖುಷವಂತ್‌ಸಿಂಗ್‌ಗೆ ಅರ್ಥವಾಗೋದಕ್ಕೆ ಸಾಧ್ಯವೇ ಇಲ್ಲ. ಆದ್ದರಿಂದ ಅವರು ಹಾಗೆ ಮಾತಾಡಿದ್ದಾರೆ, ಪಾಪ! ಆದರೆ ಅವರನ್ನು ನೀವು ಕೇಳಿದ್ರೆ ಟಾಲ್‌ಸ್ಟಾಯ್ ಅವರ 'ವಾರ್ ಅಂಡ್ ಪೀಸ್' ಕೂಡ ಬೋರ್ ಅನ್ನಬಹುದು. 'ಅನ್ನಾಕರೇನಿನಾ' ಕೂಡ ಅವರಿಗೆ ಒಂದು ರೊಮ್ಯಾಂಟಿಕ್ ದೃಷ್ಟಿಕೋನದಿಂದ ಮಾತ್ರ ಚೆನ್ನಾಗಿ ಕಾಣಬಹುದು. ಆದರೆ ಅದರಲ್ಲಿ ಬರುವ ವಿವರಗಳೆಲ್ಲ ಬೋರೆನ್ನಿಸಬಹುದು.

ಆದರೆ, ಒಂದು ಮುಖ್ಯ ಅಂಶವನ್ನು ಗಮನಿಸಬೇಕು. ಇಂಡಿಯಾದಲ್ಲಿ ಟ್ಯಾಗೋರ್ ಕೂಡ ಇಂಗ್ಲಿಷಿಗೆ ತನ್ನ ಕೃತಿಯನ್ನು ಭಾಷಾಂತರ ಮಾಡಿಸಿಕೊಳ್ಳೋದಕ್ಕೆ ಬಹಳ ಆಸೆ ಪಟ್ಟರು. ನನಗೆ ಟ್ಯಾಗೋರ್ ಕುರಿತು ಒಂದು ಬೇಸರದ ಅಂಶ ಅನಿಸೋದು ಅವರು ಇಂಗ್ಲಿಷಿಗೆ ತಾನು ಭಾಷಾಂತರವಾಗುವುದರ ಬಗ್ಗೆ ತೋರಿಸುವ ಆಸಕ್ತಿಯ ವಿಚಾರದಲ್ಲಿ. ಅದು ತಪ್ಪು ಅಂತ ನಾನು ಹೇಳಲ್ಲ, ಅದರಲ್ಲಿದ್ದ ವಿಶೇಷವಾದಂತಹ ಆಸಕ್ತಿ ಕುರಿತು ನಾನು ಹೇಳುತ್ತಿರೋದು. ಅದು ಕೂಡ ನಮ್ಮ ನಡುವೆ ಇರುವ ಇಂಪೀರಿಯಲಿಸಮ್ಮನ್ನು ತೋರಿಸುತ್ತೆ. ನಾವೆಲ್ಲ ಇನ್ನೂ ವಸಾಹತುಶಾಹಿ ಪ್ರಭಾವದಿಂದ ಹೊರಗೆ ಬಂದವರಲ್ಲ. ಯಾವ ಫ್ರೆಂಚ್ ಲೇಖಕನೂ ತನ್ನ ಪುಸ್ತಕ ಇಂಗ್ಲಿಷಿನಲ್ಲಿ ಎಷ್ಟು ಚೆನ್ನಾಗಿ ಬಂದಿದೆ, ಅದರಿಂದಲೇ ತನ್ನ ಇಡೀ ಸಾಹಿತ್ಯದ ಪ್ರಾಮುಖ್ಯತೆ ತೀರ್ಮಾನವಾಗುತ್ತೆ ಅಂತ ತಿಳಿಯಲ್ಲ. ಆದರೆ, ನಮ್ಮಲ್ಲಿ ಟ್ಯಾಗೋರರನ್ನ ಕುರಿತು ಅವರ ಇಂಗ್ಲಿಷ್ ಭಾಷಾಂತರದಿಂದ ನಾವು ತೀರ್ಪು ಕೊಡಬಹುದು ಅಂತ ತಿಳಿದಿದ್ದೀವಲ್ಲ ಅದು ಕೂಡ ನಮ್ಮ ವಸಾಹತುಶಾಹಿಯಿಂದ ಬಂದ ಮನಸ್ಸನ್ನೆ ತೋರಿಸುತ್ತೆ. ಬಂಗಾಳಿಯಲ್ಲೂ ಅದು ಇಂಗ್ಲಿಷಿನಲ್ಲಿ ಇರೋದಕ್ಕಿಂತ ಚೆನ್ನಾಗಿದೆ ಅಂತ ನಾವು ಅಷ್ಟು ಬೊಬ್ಬೆ ಹೊಡೆಯಬೇಕಾದ ಅಗತ್ಯ ಕೂಡ ಇರಲಿಲ್ಲ. ಅದು ಗೃಹೀತ ಅಂತ ತಿಳಿದುಕೊಳ್ಳಬೇಕಾಗಿತ್ತು.

ಇವತ್ತು ಒಬ್ಬ ಲೇಖಕನನ್ನ empower ಮಾಡೋದು ಇಂಗ್ಲಿಷ್. ಒಬ್ಬ ಭಾರತೀಯ ಲೇಖಕನನ್ನ empower ಮಾಡೋದು, ಅವನಿಗೆ ಅಖಿಲ ಭಾರತೀಯ ಮಟ್ಟದಲ್ಲಿ ಒಂದು ಶಕ್ತಿಯನ್ನು ತಂದುಕೊಡೋದು ಅವನ ಇಂಗ್ಲಿಷ್ ಭಾಷಾಂತರ. ಅದು ಹಿಂದಿಯಲ್ಲೂ ಆಗಬಹುದಾಗಿತ್ತು. ಆದರೆ ಆಗಲಿಲ್ಲ. ಅವನ ಕೃತಿ ಇಂಗ್ಲಿಷ್‌ನಲ್ಲಿ ಚೆನ್ನಾಗಿ ಕಂಡರೆ ಹಿಂದಿಯಲ್ಲೂ ಚೆನ್ನಾಗಿ ಕಾಣಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಇದು ಕೇವಲ ಒಂದು ಸಾಹಿತ್ಯದಿಂದ ಇನ್ನೊಂದು ಸಾಹಿತ್ಯಕ್ಕೆ ಒಂದು ಕೃತಿ ಹೋಗುವುದರ, ಅಂದರೆ ಕೇವಲ ಭಾಷಾಂತರದ, ಪ್ರಶ್ನೆ ಅಲ್ಲ. ಹಾಗಿದ್ರೆ ಬಹಳ ಚೆನ್ನಾಗಿರೋದು ಯಾಕೆ ಇಂಗ್ಲಿಷ್‌ನಲ್ಲಿ ಚೆನ್ನಾಗಿ ಆಗಬಾರದು? ಆಗಲೇಬೇಕು. ಆದರೆ ಹಾಗೆ ಆಗೋದಕ್ಕೆ ಇರುವ ಅತಿ ಪ್ರಾಮುಖ್ಯತೆ

ಇದೆಯಲ್ಲ ಅದನ್ನು ನೋಡಬೇಕು. ಈ ಅತಿ ಪ್ರಾಮುಖ್ಯತೆ ನಮ್ಮ ಸಾಂಸ್ಕೃತಿಕವಾದ ಒಂದು ಬಂದಳಿಕೆಯ ಪ್ರವೃತ್ತಿಯನ್ನು ತೋರಿಸುತ್ತದೆ. ಟ್ಯಾಗೋರರನ್ನು ಹಾಗೆ ತೂಕ ಕಟ್ಟಬಹುದು ಅಂತ ಸ್ವತಃ ಟ್ಯಾಗೋರ್ ತಿಳಿದಿದ್ರೆ, ಹಾಗೆ ಉಳಿದವರೂ ತಿಳಿದಿದ್ರೆ ಅದೊಂದು ದುಃಖಕರವಾದ ವಿಷಯ ಅಂತಾನೇ ನಾನು ತಿಳಿದುಕೊಂಡಿದ್ದೀನಿ.

ಟ್ಯಾಗೋರ್ ಮಾಡಿದ ಇನ್ನೊಂದು ಮುಖ್ಯ ಕೆಲಸ ಏನು ಅಂದ್ರೆ ಒಂದು ಬಂಗಾಳಿ ಭಾಷೆಗೆ ಇಡೀ ಭಾರತವನ್ನು ಜೀರ್ಣಿಸಿಕೊಳ್ಳುವ ಶಕ್ತಿಯನ್ನು ತಂದದ್ದು. ನೀವು ರವೀಂದ್ರರ ಸಂಗೀತ ಕೇಳಿದರೆ ಇವರು ಕರ್ನಾಟಕದ ತ್ಯಾಗರಾಜರ ಮಾದರಿಯಲ್ಲೂ ಕೂಡ ಬರೆದುಬಿಟ್ಟಿದ್ದಾರೆ ಅನ್ನುವುದು ಗೊತ್ತಾಗುತ್ತದೆ. ಅಂದರೆ, ಎಲ್ಲ ಮಾದರಿಗಳನ್ನೂ ಹಿಡಿದು ಇಡೀ ಭಾರತವನ್ನು ವ್ಯಾಪಿಸುವ ಹಾಗೆ ಅವರು ಮಾಡಿದ್ದಾರೆ. ನಮ್ಮೆಲ್ಲ ಭಾಷೆಗಳಿಗೂ ಈ ಹಸಿವಿದೆ. ಈಗ 'ರಾಮಾಯಣದರ್ಶನಂ' ಅನ್ನ ಕುವೆಂಪು ಯಾಕೆ ಬರಿತಾರೆ ಅಂದ್ರೆ ಒಂದು ಅಖಿಲ ಭಾರತ ಕೃತಿಯನ್ನ ಕನ್ನಡದಲ್ಲಿಯೂ ಬರೆಯಲಿಕ್ಕೆ ಸಾಧ್ಯ ಅಂತ. ಪಂಪನೂ ಇದನ್ನ ಮಾಡಿದ್ದಾನೆ. ಜೊತೆಗೆ ಈಗ ನಮ್ಮ ಭಾರತೀಯ ಭಾಷೆಗಳಲ್ಲಿ ಏನಾಗಿದೆ ನೋಡೋಣ. ನಾನು ಆಗಲೇ ಹೇಳಿದೆ - ನಾವು ಒಂದು ಭಾಷೆಯನ್ನ ಆಯುವಾಗ ಆ ಭಾಷೆಯ ಸಾಹಿತ್ಯ ಪರಂಪರೆಯನ್ನೂ ಆಯ್ದಿರ್ರೀವಿ ಮತ್ತು ಅದು ನಮ್ಮ ಮನಸನ್ನ ತೊಡಗಿಸಿಕೊಳ್ಳಬಲ್ಲ ಕ್ರಮವನ್ನೂ ಆಯ್ದಿರ್ರೀವಿ. ಆದ್ದರಿಂದ ಒಬ್ಬ ಭಾರತೀಯ ಲೇಖಕ ಇಂಗ್ಲಿಷನ್ನು ಆಯ್ದಾಗ ಆ ಸರಕು ಸಂಸ್ಕೃತಿಯಿಂದ ಇಂಗ್ಲಿಷ್ ಪಡೆದಿರುವ ಸದ್ಯೋಜಾತವಾದ ಗುಣವನ್ನೂ ಆಯ್ತಾನೆ.

ಆದರೆ ಈಗ ಭಾರತೀಯ ಭಾಷೆಗಳಲ್ಲಿ ಏನಾಗಿದೆ (ಭಾರತೀಯ ಭಾಷೆಗಳಿಗೆ ಒಂದು ಜೀರ್ಣಾಗ್ನಿ ಇದೆ ಅಂತ ನಾನು ಹೇಳುತ್ತಾ ಬಂದಿದ್ದೇನೆ) ಅಂದ್ರೆ ಅವು ಐರೋಪ್ಯ ಸಂಸ್ಕೃತಿಯನ್ನು ಜೀರ್ಣ ಮಾಡಿಕೊಂಡಿವೆ. ಅಂದ್ರೆ ಭಾರತೀಯ ಭಾಷೆಗಳ ಒಳಗೇ ಇಂಗ್ಲಿಷ್‌ನಿಂದ ಬರೆದಾಗ ಸಿಗುವಂಥ ಪರಂಪರೆ ಇದ್ಯಲ್ಲ, ನಾವು ಯಾವುದನ್ನು ಸಾಹಿತ್ಯದ expectations ಅಂತ ಕರಿತೀವಿ, ಸಾಹಿತ್ಯದಿಂದ ನಾವು ಬಯಸುವ ಗುಣಗಳಿವೆಯಲ್ಲ ಅದನ್ನು ನಮ್ಮ ನಮ್ಮ ಭಾಷೆಗಳ ಒಳಗೇನೇ ಪಡೆಯುವ ಹಾಗೆ ನಾವು ಮಾಡಿದ್ದೇವೆ. ಆದ್ದರಿಂದ ಕನ್ನಡದಂಥ ಸಂಸ್ಕೃತಿಯಲ್ಲಿ ಪು.ತಿ.ನ. ರೀತಿಯ ಬರವಣಿಗೆ ಸಾಧ್ಯ ಇದೆ. ನರಸಿಂಹಸ್ವಾಮಿ ರೀತಿಯ ಬರವಣಿಗೆ ಸಾಧ್ಯ ಇದೆ. ಅಡಿಗರ ರೀತಿಯ ಬರವಣಿಗೆ ಸಾಧ್ಯ ಇದೆ. ಆಮೇಲೆ ಬಹಳ ಚುರುಕಾಗಿ ಸರಕು ಸಂಸ್ಕೃತಿಯಿಂದ ಹುಟ್ಟಿಕೊಂಡು ಬಂದ ಆಕರ್ಷಕ ಅಂಶಗಳ ಬಗ್ಗೆ ಬರೆಯೋದು ಸಾಧ್ಯ ಇದೆ. ತುಂಬಾ ಮಾಡರ್ನ್ ಆಗಿದೆ ನಮ್ಮ ಸಾಹಿತ್ಯ. ಪ್ರಾಯಶಃ ತಮಿಳು ನಮ್ಮ ಭಾಷೆಯಷ್ಟು ಆಧುನಿಕವಾಗಿಲ್ಲದೆ ಇರಬಹುದು. ಆದ್ದರಿಂದ ಅದಕ್ಕೆ ಅನೇಕ ಜನ ತಮಿಳಿನಲ್ಲಿ ಈ ಥರ ಬರೆಯಬೇಕು ಅಂತಿರುವವರು ಇವತ್ತು

ಇಂಗ್ಲಿಷ್‌ಗೆ ಹೋಗಿಬಿಡಬಹುದು. ಆದರೆ ಕನ್ನಡದಲ್ಲಿ ಈ ಥರ ಬರೆಯಬೇಕು ಅನ್ನುವವರು ಈಗ ಇಂಗ್ಲಿಷ್‌ಗೆ ಹೋಗಬೇಕಾಗಿಲ್ಲ. ಈಗ ಕನ್ನಡದಲ್ಲೇ ಅದು ದೊರೆಯುತ್ತಿದೆ. ಈಗ ಬಂಗಾಳಿ ಭಾಷೆ ಅನ್ನೋದು ಬೆಳೀತಾ ಇದೆ. ಅದು ಟ್ಯಾಗೋರ್ ನಂತರ (ಹಾಗೂ ಟ್ಯಾಗೋರ್‌ನಿಂದಾಗಿಯೂ) ಐರೋಪ್ಯ ಸಂಸ್ಕೃತಿಯಲ್ಲಿರುವ ಸಾಹಿತ್ಯ ಸಂಪ್ರದಾಯಗಳಿಂದ, ಪರಂಪರೆಗಳಿಂದ ಪಡೆಯಬಹುದಾದ್ದನ್ನು ಬಂಗಾಳಿಯಲ್ಲಿಯೂ ಪಡೆಯುವ ಸಾಧ್ಯತೆಯನ್ನು ಕಂಡುಕೊಂಡೂ ಬಿಟ್ಟಿದೆ. ಇದು wonderful. ಖುಷವಂತಸಿಂಗ್‌ಗೆ ಇದು ಗೊತ್ತಿಲ್ಲ. ಒಂದು ವೇಳೆ ಗೊತ್ತಿದ್ದರೆ ಅಷ್ಟರಮಟ್ಟಿಗೆ ನಮ್ಮ ಭಾಷೆಗಳಲ್ಲಿ ನಡೆಯುತ್ತಾ ಇರೋದು ಒಳ್ಳೆಯದು ಅಂದಾರು ಅವರು. ಆದರೆ ಅಂಥವರು ಇಂಗ್ಲಿಷಲ್ಲೇ ತಮ್ಮ ಮನಸ್ಸನ್ನು ಸೃಷ್ಟಿಸಿಕೊಂಡು ಅಷ್ಟರಮಟ್ಟಿಗೆ ಇಷ್ಟಪಡುತ್ತಾರೆ.

ನಮ್ಮ ನಮ್ಮ ಭಾಷೆಗಳಲ್ಲಿ ಕೂಡ ಇಂಥ ಟೆಸ್ಟ್ ಇದೆ. ಇವತ್ತು ಕನ್ನಡದಲ್ಲಿರುವ ನಿಜವಾದ test ಏನು ಅಂದರೆ ನನಗೆ ಒಬ್ಬ ಲಕ್ಷ್ಮಣರಾವ್‌ನ ಪದ್ಯಗಳನ್ನು ಇಷ್ಟಪಡೋದರ ಜೊತೆಗೇ ಪಂಪನೂ ಇಷ್ಟವಾದರೆ ಅಷ್ಟರ ಮಟ್ಟಿಗೆ ಕನ್ನಡ ಸಂಪ್ರದಾಯ ಆರೋಗ್ಯಕರವಾಗಿದೆ ಅಂತ ಅರ್ಥ. ಯಾಕೆಂದರೆ ಇಡೀ ಕನ್ನಡ ಸಂಪ್ರದಾಯದಲ್ಲಿ ಇಂಥ ಒತ್ತಡಗಳನ್ನು ನಮ್ಮ ಸಂಪ್ರದಾಯ ತರುತ್ತಾ ಇದೆ. ನಾವು ನವ್ಯರು ಬರೀ ಆಧುನಿಕವಾದದ್ದೇ ಸಾಕು ಅಂತ ಕೂರಲಿಲ್ಲ. ಅಡಿಗರ ಜೊತೆ ನಾವು ಮಾತಾಡುವಾಗ ಪಂಪ ಅಥವಾ ವಚನಕಾರರೂ ಮುಖ್ಯವಾಗೋರು. ನವ್ಯ ಚಳುವಳಿಯಲ್ಲಿ ಅದೂ ಇತ್ತು. ಐರೋಪ್ಯ ರೀತಿಯ ಸಾಹಿತ್ಯದ ಅಪೇಕ್ಷೆಗಳನ್ನು ಪೂರೈಸುತ್ತಲೇ ನಾವಿದನ್ನು ಮಾಡಬೇಕಾಗುತ್ತದೆ. ನಮ್ಮ ನಾಡಿನಲ್ಲಿ ಒಂದು fact ಏನು ಅಂದರೆ ನಮ್ಮ ಭಾಷೆಗಳನ್ನು ಉಳಿಸುವವರು ಅನಕ್ಷರಸ್ಥರಾದ್ದರಿಂದ, ಅನಕ್ಷರಸ್ಥರು ಈ ಭಾಷೆಯನ್ನು ಮಾತಾಡದೇ ಇದ್ದರೆ, ಉಳಿಸದೇ ಇದ್ದರೆ ಮುಸ್ಲಿಮರ ಆಳ್ವಿಕೆಯಲ್ಲಿ ಪರ್ಶಿಯನ್ನೇ ನಮ್ಮ ಭಾಷೆಯಾಗಿಬಿಡೋದು ಅಥವಾ ಬ್ರಿಟಿಷರ ಆಳ್ವಿಕೆಯಲ್ಲಿ ಇಂಗ್ಲಿಷೇ ನಮ್ಮ ಭಾಷೆಯಾಗಿ ಬಿಡೋದು. ಅಥವಾ ವೈದಿಕರ ಆಳ್ವಿಕೆಯಲ್ಲಿ ಸಂಸ್ಕೃತವೇ ನಮ್ಮ ಭಾಷೆಯಾಗಿಬಿಡೋದು. ಅಂದರೆ ಹಿಂದುಳಿದವರು ಮತ್ತು ಅನಕ್ಷರಸ್ಥರು ಈ ಭಾಷೆಯನ್ನು ಉಳಿಸಿದರು. ಆದ್ದರಿಂದ ನೀವು ಅತ್ಯಾಧುನಿಕವಾದಾಗಲೂ ಅದರ ಜೊತೆ ಸಂಪರ್ಕ ಇಟ್ಟುಕೊಳ್ಳಬೇಕಾಗುತ್ತದೆ. ಇಂಗ್ಲಿಷ್‌ನಲ್ಲಿ ಈ ರೀತಿಯ ಒತ್ತಾಯವೇ ಇಲ್ಲ. ಆದರೆ ಆ ಒತ್ತಾಯವನ್ನು ಪಡೆದಂಥವನು ಯೇಟ್ಸ್. ಅವನು ಅತ್ಯಾಧುನಿಕವಾದ ಐರೋಪ್ಯ ಸಂಸ್ಕೃತಿಯಿಂದ ಎಷ್ಟು ಪ್ರೇರಣೆ ಪಡೆದನೋ ಅದೇ ರೀತಿ ಐರಿಷ್ ಜಾನಪದ ಸಂಸ್ಕೃತಿಯಿಂದಲೂ ಪಡೆದ. ಅದಕ್ಕೇ ಇಂಗ್ಲಿಷ್ ಬಹಳ ದೊಡ್ಡ ಭಾಷೆ. ಇಂಗ್ಲಿಷ್ ಬಹಳ ದೊಡ್ಡ ಭಾಷೆಯಾಗಿರುವುದಕ್ಕೆ ಕಾರಣ ಏನೆಂದರೆ, ಅದಕ್ಕೆ ಯಾವಾಗಲೂ ಒಂದು ಗ್ರಾಮೀಣ ಸಂಸ್ಕೃತಿ ಲಭ್ಯವಾಗಿತ್ತು. ಜಾನ್‌ಸನ್ ಕಾಲದಲ್ಲಿ ಅಲ್ಲೇ ಲಭ್ಯವಾಗಿತ್ತು. ಆಮೇಲೆ ಅದು ಐರ್ಲೆಂಡಿನಲ್ಲಿ ಲಭ್ಯವಾಗಿತ್ತು.

ಆಮೇಲೆ ಅದು ಆಫ್ರಿಕಾದಿಂದ ಬಂತು. ಆಮೇಲೆ ಇಂಡಿಯಾದಲ್ಲಿ ಲಭ್ಯವಾಯಿತು. ಹಾಗೆ ಲಭ್ಯವಾಗಿದ್ದು ರಾಜಾರಾವ್ ಥರದವರು ಬರೆದಾಗಲೇ ಹೊರತು ಖುಷವಂತ್‌ಸಿಂಗ್ ಅಂಥವರು ಬರೆದಾಗ ಅಲ್ಲ, ತನಗೆ ಇಂಗ್ಲೆಂಡ್ ಮತ್ತು ಅಮೆರಿಕಾದಲ್ಲಿ ಯಾವುದು ಲಭ್ಯವಿಲ್ಲವೋ ಅಂಥದ್ದನ್ನು ಇಂಗ್ಲಿಷ್ ಬೇರೆ ಕಡೆಯಿಂದ ಪಡೆಯಿತು.

ಕೇವಲ ಇಂಗ್ಲಿಷ್ ವಿರೋಧಿಯಾಗಿ ಕಾಣೋದಕ್ಕಲ್ಲ ನಾನಿದನ್ನು ಹೇಳುತ್ತಿರುವುದು. ನಾನು ಒಟ್ಟು ಸಾಹಿತ್ಯದ ಸ್ವರೂಪದ ಬಗ್ಗೆ ಹೇಳುತ್ತಾ ಇದ್ದೇನೆ. ಇವತ್ತು ಇಂಗ್ಲಿಷ್‌ನಲ್ಲಿ ಬರೆಯುತ್ತಿರುವವರಲ್ಲಿ ನನಗೆ ಆಕರ್ಷಕವಾಗಿ ಕಾಣುವ ಲೇಖಕನೆಂದರೆ ಅಮಿತಾವ್ ಘೋಷ್. ಅಮಿತಾವ್ ಘೋಷ್ ಹೇಗೆ ಬರಿತಾನೆ ಅಂದರೆ, ಇದನ್ನು ಬಂಗಾಳಿಯಲ್ಲೇ ಬರೆಯಬಹುದಾಗಿತ್ತು ಅನ್ನುವ ಥರ ಬರೀತಾನೆ. ಈಗ ಅಮಿತಾವ್ ಘೋಷ್‌ನನ್ನು ನಾವು ಓದಿದರೆ ಅದು ಇಂಗ್ಲಿಷ್‌ನಲ್ಲಿದೆ ಅಷ್ಟೆ. ಆದರೆ ಅದು ಕನ್ನಡದಲ್ಲೂ ಇರಬಹುದಾಗಿತ್ತು. ಇಂಗ್ಲಿಷ್‌ಗೆ ಆ ಸೌಲಭ್ಯವಿದೆ. ಅದು ಅಪಾರವಾದ ಜೀರ್ಣ ಶಕ್ತಿಯನ್ನು ಪಡೆದ ಭಾಷೆ. ಖುಷವಂತ್‌ಸಿಂಗ್ ಅದಕ್ಕೂ ಸೇರಿದವರಲ್ಲ ಅಂತ ನಾನು ಹೇಳೋದು. ಆದ್ದರಿಂದ ಖುಷವಂತ್‌ಸಿಂಗ್ ಅಂಥವರ ಮನಸ್ಸಿಗೆ ಟ್ಯಾಗೋರ್ ಥರದವರ ಮನಸ್ಸು ದೂರವಾಗಿ ಕಾಣುತ್ತೆ. ಇದು symptomatic. ಆದ್ದರಿಂದ ಖುಷವಂತ್‌ಸಿಂಗ್ ಒಬ್ಬರನ್ನೇ ಇಟ್ಟುಕೊಂಡು ಯೋಚನೆ ಮಾಡೋದಲ್ಲ. ಈ ಆವರಣದಲ್ಲಿ ಯೋಚನೆ ಮಾಡಬೇಕಾಗುತ್ತದೆ.

ಈಚೆಗೆ ನಾನು ಟ್ಯಾಗೋರರ ಚಿಕ್ಕದೊಂದು ಪುಸ್ತಕ ಓದಿದೆ. A Vision of India's History ಅಂತ ಅದರ ಹೆಸರು. ಮೊದಲನೆಯ ಬಾರಿಗೆ ಇಂಡಿಯಾದ ಚರಿತ್ರೆಯ ಬಗ್ಗೆ ಯಾವ ಇಂಡಿಯಾದ ಚರಿತ್ರಕಾರನಿಗೂ ಎತ್ತಲು ದಮ್ಮಿಲ್ಲದಂತಹ ಪ್ರಶ್ನೆಗಳನ್ನು ಅದರಲ್ಲಿ ಅವರು ಎತ್ತಿದ್ದಾರೆ...... ನನಗೆ ಇನ್ನೊಂದು ವಿಚಾರ ನೆನಪಾಗುತ್ತಾ ಇದೆ. ಟ್ಯಾಗೋರ್ ಬಗ್ಗೆ ಇರುವ ಒಂದು ಬಹಳ ಒಳ್ಳೆ ವಿಮರ್ಶೆ ಅಂದರೆ ಕುವೆಂಪು ಅವರದು. ಅಲ್ಲಿ ಕುವೆಂಪು 'ಟ್ಯಾಗೋರರಿಗೆ epic ಯಾಕೆ ಬರೆಯಲಿಕ್ಕೆ ಆಗಲಿಲ್ಲ' ಅಂತ ಕೇಳ್ತಾರೆ. ಆಮೇಲೆ ಅವರೇ ಹೇಳುತ್ತಾರೆ : 'ಟ್ಯಾಗೋರ್‌ಗೆ ಯಾಕೆ epic ಬರೆಯಲಿಕ್ಕೆ ಆಗಲಿಲ್ಲ ಅಂದರೆ ಅವರು ಬ್ರಹ್ಮಸಮಾಜದವರಾದ್ದರಿಂದ, ಪುರಾಣಗಳಲ್ಲೆಲ್ಲ ಅವರು ಶ್ರದ್ಧೆಯನ್ನು ಕಳೆದುಕೊಂಡಿದ್ದರಿಂದ, ಅದನ್ನು ಅವರು ಅನುಮಾನಿಸುವುದಕ್ಕೆ ಶುರು ಮಾಡಿದ್ದರಿಂದ ಅವರಿಗೆ epic ಬರೆಯಲಿಕ್ಕೆ ಆಗಲಿಲ್ಲ' ನಾನು ನಮ್ಮ ಬಂಗಾಳಿ ಮಿತ್ರರಿಗೆ ಹೇಳ್ತಾ ಇರ್ತೇನೆ - ಈ ಕುವೆಂಪು ಲೇಖನವನ್ನು ಬಂಗಾಳಿಗೆ ಅನುವಾದ ಮಾಡಿ ಅಂತ.

ಟ್ಯಾಗೋರರಲ್ಲಿ ಮಿತಿಗಳೇ ಇಲ್ಲ ಅಂತ ನಾನು ಹೇಳ್ತಾ ಇಲ್ಲ. ಅವರ ಸಣ್ಣಕತೆಗಳು ಕೆಲವು ಕಾದಂಬರಿಗಳು ಬಹಳ ಅದ್ಭುತವಾಗಿವೆ. ಅವರ ಪದ್ಯ ನನಗೆ ಗೊತ್ತೇ ಆಗಿಲ್ಲ. ಏಕೆಂದರೆ ಬಂಗಾಳಿಯಲ್ಲಿ ನಾನದನ್ನು ಓದಕ್ಕೆ ಆಗಿಲ್ಲ. ಪದ್ಯದ ವಿಷಯದಲ್ಲಿ ನಾವೆಲ್ಲರೂ

ಸಾಮಾನ್ಯವಾಗಿ ಪತಿವ್ರತೆಯರ ಹಾಗೆ ಇರ್‍ತೇವೆ. ಅಂದರೆ, (ನಾನಂತೂ) ಪದ್ಯದ translation ಅನ್ನು ಓದಲೇಬೇಕಾದಾಗ ಓದುತ್ತೇನೆ, ಅಷ್ಟೆ. ಆದರೆ ಟ್ಯಾಗೋರ್ ಕಾವ್ಯವನ್ನು ಬಂಗಾಳಿಯಲ್ಲೇ ಓದಿ ತಿಳಿದುಕೊಳ್ಳಬೇಕು ಅಂತ ಇಷ್ಟ........ ಟ್ಯಾಗೋರರ ಕಾವ್ಯದ ಬಗ್ಗೆ ನಿಜವಾದ ಚಿಂತನೆ ಮಾಡಬೇಕು ಅಂತ ಅಂದರೆ ಎ. ಆರ್. ಕೃಷ್ಣಶಾಸ್ತ್ರಿಗಳ ಥರ ಬಂಗಾಳಿಯನ್ನೇ ಕಲಿತು ಓದಿ ವಿಮರ್ಶಿಸಬೇಕು. ಹಾಗೆಯೇ ಕಾಳಿದಾಸನನ್ನು ಕೂಡ ವಿಮರ್ಶೆ ಮಾಡಬೇಕಾಗುತ್ತೆ. ಆದರೆ ಒಂದು ಮುಖ್ಯ : ಯಾವುದೇ ಸಾಹಿತ್ಯ ವಿಮರ್ಶಕನೂ ಕೂಡ "ಇದು ನನ್ನ ರುಚಿ, ಆದ್ದರಿಂದ ಹೀಗೆ ಹೇಳುತ್ತಾ ಇದ್ದೇನೆ...." ಎನ್ನುವ ಧಿಮಾಕಿಗೆ ಹೋಗಬಾರದು. 'ನನ್ನ ರುಚಿ' ಅನ್ನುವ ಮಾತನ್ನು ಬಳಸುವಾಗ ನನ್ನ ರುಚಿ ಹೇಗೆ ಬೆಳೆದಿದೆ ಅನ್ನುವ ಪ್ರಶ್ನೆಯೂ ಬಹಳ ಮುಖ್ಯ. "ಇದು ನನ್ನ ರುಚಿ, ನನ್ನ ರುಚಿಗೆ ಹೀಗೆ ಅನಿಸುತ್ತದೆ" ಅಂತ ಅಂದುಬಿಡೋದು ಬಹಳ ಧಿಮಾಕಿನ ಮಾತಾಗಿಬಿಡುತ್ತದೆ. ಮೊದಲು ನನ್ನ ರುಚಿಯನ್ನು ರೂಪಿಸುವುದನ್ನೂ ನೋಡಬೇಕು. ಆದಷ್ಟು ಹೆಚ್ಚನ್ನು ಅದು ಉಂಡು, ಪಡೆದು, ಅದನ್ನು ಉಜ್ಜಿ ನೋಡಿ, ಆ ರುಚಿ ರೂಪಿತವಾಗಿರೋದಾದರೆ ಆ ರುಚಿಗೆ ಬೆಲೆಯಿರುತ್ತೆ. ಇಲ್ಲದೇ ಇದ್ದರೆ ಏನು ಬೇಕಾದರೂ ಹೇಳಬಹುದು. ನನ್ನ ರುಚಿಗೆ ಇದು ಹಿಡಿಸಲಿಲ್ಲ ಅಂದುಬಿಡಬಹುದು. ಕವಿಯಾಗಿ ಟ್ಯಾಗೋರರ ಮಹತ್ವ ಏನು ಅಂತ ಹೇಳೋದಕ್ಕೆ ಕುವೆಂಪು ಅವರ ವಿಮರ್ಶೆ ಓದಬೇಕು. ಬಹಳ ಚೆನ್ನಾಗಿದೆ ಆ ವಿಮರ್ಶೆ. ನನಗೇನೇ ಟ್ಯಾಗೋರರ ಪದ್ಯಗಳಿಗಿಂತ ಬೇಂದ್ರೆಯ ಪದ್ಯಗಳು ಅದ್ಭುತ ಅನಿಸುತ್ತದೆ. ಅಡಿಗರು ಟ್ಯಾಗೋರರ ಮೇಲೆ ಇಂದು ಇಂಗ್ಲಿಷ್ ಪದ್ಯ ಬರೆದಿದ್ದಾರೆ. ಅದರಲ್ಲಿ ಟ್ಯಾಗೋರರನ್ನು condemn ಮಾಡಿ ಬರೆದಿದ್ದಾರೆ. ಈಗ ಖುಷವಂತ್‌ಸಿಂಗ್ ಹೇಳಿರೋದನ್ನು ಪದ್ಯದ ಜೊತೆಗೆ ಹೋಲಿಸಿ ನೋಡಬೇಕು. ಬಹಳ ಚೆನ್ನಾಗಿದೆ ಆ ಪದ್ಯ. ಅಡಿಗರು ಟ್ಯಾಗೋರರನ್ನು ಹೇಗೆ ನೋಡುತ್ತಾರೆ ಅಂದರೆ, ಅಡಿಗರಿಗೆ ಒಂದು ವಿರೋಧ ಇತ್ತು. ನಾವು ಭಾಷೆಯನ್ನು ಸಂಗೀತಮಯವಾಗಿ, ನಾದಮಯವಾಗಿ ಮಾಡುವುದರ ಮೂಲಕ ವಾಸ್ತವವನ್ನು ಗ್ರಹಿಸದೇ ಹೋಗುವುದಿದೆಯಲ್ಲ, ವಾಸ್ತವದ ಜೊತೆಗೆ ಅದು ತಿಕ್ಕಾಡದೇ ಹೋಗುತ್ತದಲ್ಲ, ಅದನ್ನು ಅಡಿಗರು ವಿರೋಧಿಸುತ್ತಿದ್ದರು. ಟ್ಯಾಗೋರರ ಕಾವ್ಯವನ್ನು ಒಂದು ರೀತಿಯ ಹಳಹಳಿಕೆಯ ಕಾವ್ಯವಾಗಿ ಕಂಡು ಅದನ್ನು ಅವರು ಟೀಕಿಸಿದ್ದಾರೆ. ಆದರೆ ಕಾದಂಬರಿಗಳ ಬಗ್ಗೆ ಆಗಲಿ, ಇನ್ನೊಂದರ ಬಗ್ಗೆಯಾಗಲೀ ಹೇಳಿಲ್ಲ.

ಟ್ಯಾಗೋರರ ಚಿಂತನೆಗಳಿವೆಯಲ್ಲ, ಅವು ನಮ್ಮ ಗಾಢವಾದ ಉಪನಿಷತ್ತು ಇತ್ಯಾದಿಗಳ ಪರಂಪರೆಯಿಂದಲೇ ಬೆಳೆದು ಬಂದಿರುವುದೆಂದು ನಾನು ಅಂದುಕೊಂಡಿದ್ದೇನೆ. ನಾನು ಆಗಲೇ ಟ್ಯಾಗೋರರ ಚರಿತ್ರೆಯ ಪುಸ್ತಕ ಕುರಿತು ಹೇಳಿದೆನಲ್ಲ, ಆ ಪುಸ್ತಕದಲ್ಲಿ ಮುಖ್ಯವಾಗಿ ಅವರು ಎತ್ತುವ ಪ್ರಶ್ನೆ ಬ್ರಾಹ್ಮಣರದು ಮತ್ತು ಕ್ಷತ್ರಿಯರದು. ಅವರ

ಇಂಡಿಯಾದಲ್ಲಿ ನಮ್ಮ ಮನಸ್ಸಿನ ವಿಲಾಸ ಮತ್ತು ಅದರ ಸಾಹಸಗಳು, ಮತ್ತು ಹೊಸತನ್ನು ಹುಡುಕುವ ಶಕ್ತಿ ಇವೆಲ್ಲ ಚರ್ಚಿಸುತ್ತಾ ಇದರಲ್ಲಿ ಕ್ಷತ್ರಿಯರ ಪ್ರಾಮುಖ್ಯತೆಯನ್ನು ಕಾಣುತ್ತಾರೆ. ಅದರಲ್ಲಿ ಇನ್ನೊಂದು observation ಇದೆ - ವೈಷ್ಣವ ಸಂಪ್ರದಾಯ ಬೆಳೆದಾಗಲೇ ಇಂಡಿಯಾ ಒಂದು ನಾಗರೀಕತೆಯಾಯಿತು ಅಂತ. ಆ ಪುಸ್ತಕದ ಮುಖ್ಯವಾದ ಲಕ್ಷಣ ಅಂದರೆ ಒಂದು ವಾಗ್ವಾದಕ್ಕೆ ನಮ್ಮ ಚರಿತ್ರೆಯನ್ನು ಒಡ್ಡಿರುವುದು.

ನಾಟಕ ಪ್ರಕಾರದಲ್ಲೂ ಕೂಡ ಇಂಡಿಯಾದಲ್ಲಿ ಮೊದಲಿಗೆ ಬೇರೆ ರೀತಿಯ ನಾಟಕಗಳನ್ನು ಬರೆದವರು ಟ್ಯಾಗೋರ್ ಅವರು. ಇಂಡಿಯಾದಲ್ಲಿ ಬೇರೆ ರೀತಿಯ painting ಅನ್ನು ಮಾಡಿದಂಥವರು ಅವರು. ಆ Vision of India ಪುಸ್ತಕವನ್ನು ಕನ್ನಡಕ್ಕೆ ಭಾಷಾಂತರ ಮಾಡಿ ಹಾಕಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಟ್ಯಾಗೋರ್ ನಮ್ಮ ರಾಷ್ಟ್ರದ ಕಲ್ಪನೆ ಹೇಗಿರಬೇಕು ಅನ್ನೋದನ್ನು ಗಾಂಧಿಯ ಜೊತೆ ಜೊತೆಯಾಗಿಯೇ ಯೋಚನೆ ಮಾಡಿದವರು. ಅವರು ಐರೋಪ್ಯ ರಾಷ್ಟ್ರದ ಕಲ್ಪನೆಯನ್ನು ಒಪ್ಪಿದವರಲ್ಲ. ಅವರಿಗೆ ರಾಷ್ಟ್ರ ಎಂದರೆ ಒಂದು ವಿಶಾಲವಾದ ಕಲ್ಪನೆಯಿತ್ತು. ಅನೇಕ ಸಾರಿ ಗಾಂಧಿ ಮತ್ತು ಟ್ಯಾಗೋರರ ವಾಗ್ವಾದದಲ್ಲಿ ಗಾಂಧಿಯೇ ಸರಿ, ಟ್ಯಾಗೋರ್ ಅಲ್ಲ ಅಂತ ಅನಿಸಿದ್ದಿದೆ. ಆದರೆ ಗಾಂಧಿಗೆ ಎದುರಾಗಿ ಆ ರೀತಿಯ ವಾಗ್ವಾದವನ್ನು ಮಾಡಬಲ್ಲ ಶಕ್ತಿಯಿದ್ದವರು ಅವರೊಬ್ಬರೇ. ಇವರಿಬ್ಬರೂ ಸೇರಿ ಇಂಡಿಯಾದ ಕಲ್ಪನೆಯನ್ನು ನಮಗೆ ಕೊಟ್ಟಿದ್ದಾರೆ. ಆ ಕಲ್ಪನೆಯಿರದಿದ್ದರೆ ಇವತ್ತು ಡಿಸೆಂಬರ್ ಆರರಂದು ನಡೆದದ್ದು (ಅಯೋಧ್ಯಾ ಪ್ರಕರಣ) ಯಾಕೆ ತಪ್ಪೂಂತ ನಮಗೆ ಗೊತ್ತಾಗ್ತಾ ಇರಲಿಲ್ಲ. ಆದರೆ ಟ್ಯಾಗೋರರ 'ಜನಗಣಮನ' ಪದ್ಯವನ್ನು ನಾನು ಇಷ್ಟಪಟ್ಟವನಲ್ಲ. ಆ ಇಡೀ ಪದ್ಯದಲ್ಲಿ ಕಾವ್ಯದ ಸಾಲು ಅಂತ ಇರೋದು - ಆ ಸಾಲನ್ನು ಹಾಡೋದನ್ನು ನಾವು ಬಿಟ್ಟುಬಿಟ್ಟಿದೀವಿ - ಯಾವುದು ಅಂದರೆ 'ಪತನ ಅಭ್ಯುದಯ ಬಂಧುರ ಪಂಥ' ಎನ್ನುವ ಸಾಲು. ಇಂಡಿಯಾದ ಚರಿತ್ರೆ ಹೇಗಿದೆಯೆಂಬುದನ್ನು 'ಪತನ ಅಭ್ಯುದಯಗಳ ಬಂಧುರ ಪಂಥ' ಎನ್ನುವ ಒಂದು ಸಾಲಿನಲ್ಲಿ ಹೇಳಿಬಿಟ್ಟಿದ್ದಾರೆ...... ಇಂಡಿಯಾದ ಆಚೆಗೆ ಟ್ಯಾಗೋರರ ಮಹತ್ವ ಎಷ್ಟಿದೆಯೆಂದರೆ ಎಷ್ಟೋ ಜನಕ್ಕೆ ಇಂಡಿಯಾದಲ್ಲಿ ಟ್ಯಾಗೋರ್ ಒಬ್ಬರೇ ಗೊತ್ತಿರುವುದು..... ಹೀಗಿರುವಾಗ ಟ್ಯಾಗೋರ್ ಬಗ್ಗೆ ಖುಷವಂತ್‌ಸಿಂಗ್ ಥರ ತೀರಾ ಹಗುರವಾಗಿ ಮಾತಾಡೋದು ತಪ್ಪು ಅಂತ ನನ್ನ ದೃಢ ನಂಬಿಕೆ.

*(ಡಾ. ಯು. ಆರ್. ಅನಂತಮೂರ್ತಿಯವರ ಮಾತಿನ ಸಂಗ್ರಹ ರೂಪ ಇದು)*

*ಬರಹ ರೂಪ : **ಅನಿತಾ ಎಸ್.***

## ಟ್ಯಾಗೋರ್ ಅವರ 'ಫ್ರೂಟ್ ಗ್ಯಾದರಿಂಗ್'
## ಸಂಕಲನದಿಂದ ಆಯ್ದ ಭಾಗಗಳು

ಅನು : ಎಸ್. ಜಿ. ಮೈಸೂರ ಮಠ

### I

ನಿನ್ನ ಅನುಮತಿ ಇರೆ,
ಬೆತ್ತದ ಬುಟ್ಟಿ ತುಂಬ
ಎಲ್ಲ ಹಣ್ಣುಗಳ ಆಯ್ದು
ಹೊತ್ತು ತರುವೆ ನಿನ್ನಂಗಣಕೆ;
ಬತ್ತಿ ಉದುರಿದವು ಕೆಲವು,
ಹಲವಿನ್ನೂ ಕಾಯಿ, ಮಾಗಿಲ್ಲ,
ಎಲ್ಲವನ್ನೂ ತಂದೊಪ್ಪಿಸುವೆ,
ನಿನ್ನ ಪಾದಕಮಲಕ್ಕೆ

ಋತು ಪಲ್ಲವಿಸಿ ಬಳುಕಿದೆ,
ತುಂಬಿದ ಹಣ್ಣುಗಳ ಭಾರಕೆ,
ಕೇಳಿಸುತಿದೆ ತೋಪಿನ ನೆರಳಿಂದ
ಗೊಲ್ಲನೂದಿದ ಕೊಳಲ ಗಾನ.

ಹೇಳು, ದೋಣಿ ನದಿಗಿಳಿಸುವೆ,
ಬೇಸಿಗೆ ಬಿಸಿ ಗಾಳಿ ಕಲಕಿದೆ,
ತೆರೆಗಳ ಮಧುರ ಕಲರವ.

ತನ್ನದೆಲ್ಲವ ಅರ್ಪಿಸಿದೆ ಉದ್ಯಾನ,
ಬಸವಳಿದ ಇಳಿಹೊತ್ತಿನಲಿ
ನಿನ್ನ ಕರೆ ಬರುವುದು,

ತೀರದಾಚೆಯ ಕುಟೀರದಿಂದ
ಮುಸ್ಸಂಜೆ ಸಮಯದಲಿ.

## V

ನಿನ್ನ ಪ್ರಜ್ಞೆ ನನಗಿಲ್ಲದಾಗ,
ಮಣ್ಣಿನ ಸಣ್ಣ ಕಣದಲ್ಲೇ
ನಿನ್ನ ಕುರುಹು ಅಡಗಿತ್ತು.

ಪ್ರಜ್ಞೆ ಬಂದಿದೆ, ಅರಿವಿದೆ;
ಸುತ್ತಮುತ್ತಲ ಪ್ರಕೃತಿಯಲ್ಲಿ
ನಿನ್ನ ನಿಲುವ ಗುರ್ತಿಸಬಲ್ಲೆ.

ಹೂದಳಗಳ ಮೇಲೆ, ನಿನ್ನ
ಋಜುವಾತು ಅಚ್ಚೊತ್ತಿದೆ;
ಸಾರುತಿದೆ ತೆರೆಗಳ ನೊರೆ,
ಗಿರಿ ಶಿಖರಗಳು ಉದ್ಘೋಷಿಸಿವೆ.

ನಿನ್ನಿಂದ ವಿಮುಖನಾದಾಗ,
ಪತ್ರಗಳ ತಪ್ಪಾಗಿ ಓದಿದೆ,
ನಿನ್ನಿರವು ಅರ್ಥವಾಗದೆ ಕುಳಿತೆ

## XVIII

ಛೆ ಅಲ್ಲ! ಮೊಗ್ಗನು ಅರಳಿಸುವ
ಕೆಲಸ ನಿನಗಲ್ಲ.

ಮೊಗ್ಗನು ಹಿಂಡಬಹುದು,
ಹಿಸುಕಬಹುದು, ಆದರೆ,
ನಿನ್ನ ಶಕ್ತಿಗೆ ಮೀರಿದ್ದು
ಅರಳಿಸುವ ಕಾರ್ಯ.

ನೀ ಮುಟ್ಟಿದೊಡೆ ಬಾಡುವುದು,
ದಳಗಳು ಉರುಳಿ ಬೀಳುವುವು,
ಬಿದ್ದು ಮಣ್ಣಲಿ ಬತ್ತುವುವು.

ನಿನ್ನ ಸ್ಪರ್ಶಕೆ ಬಣ್ಣವುಕ್ಕದು,
ನಸುಗಂಪು ತುಂಬಲಾರದು,
ನಿನ್ನಳವಲ್ಲ, ಅರಳಿಸಿ,
ಹೂವಾಗಿರುವ ಕೆಲಸ;
ಅರಳಿಸಬಲ್ಲ ಆತನಿಗೆ
ಸುಲಭ ಸಹಜವಿದು ಕೆಲಸ.

ಅವನ ಒಂದು ನೋಟಕೆ
ಜೀವರಸ ದಮನಿ ತುಂಬಿ,
ಮೊಗ್ಗು ಕಳೆಗಟ್ಟುವುದು,
ಅವನುಸಿರು ತಾಕಿದೊಡೆ
ಮೊಗ್ಗು ಮುಡಿಬಿಚ್ಚಿ
ಗಾಳಿಯಲ್ಲಿ ಓಲಾಡುವುದು,
ಬಣ್ಣವುಕ್ಕಿ ಬರುವುದು,
ಮಧುರ ಪರಿಮಳ,
ಸವಿಗುಟ್ಟಿ ಸಾರುವುದು;
ಹೂವರಳಿಸುವಾತಂಗೆ
ಸುಲಭ ಸಹಜದ ಪ್ರಕ್ರಿಯೆ.

## XIV

ನನ್ನ ಪಾಲಿನ ಪಂಚಾಮೃತ
ಕೊಡುವೆನೆಂದು ವಚನವಿತ್ತಿದ್ದೆ;
ಅದಕ್ಕಾಗಿ ಕಂಗೊಳಿಸಿದೆ
ಕಂಗಳ ಕಂಬನಿಯಲ್ಲಿ
ನಿನ್ನ ಅಭಯರಶ್ಮಿ

ಪರರ ಹಿಂಬಾಲಿಸಲು ಭಯ,
ಯಾವ ಮೂಲೆಯಲಿ
ಕಾಯುತಿರುವೆಯೊ ನೀನು
ಕೈಹಿಡಿದು ಕರೆದೊಯ್ಯಲು ?

ನನ್ನ ಪಾಡಿಗೆ ನಾ ತಿರುಗುವೆ
ನನ್ನ ದೋಷಗಳೇ ನಿನ್ನ ಎಳೆದು
ತರುವುದಿಲ್ಲವೆ ನನ್ನ ಬಾಗಿಲಿಗೆ?

ಏಕೆಂದರೆ
ನನ್ನ ಪಾಲಿನ ಪಂಚಾಮೃತ
ಇಹದಲ್ಲೇ ಕೊಡುವುದಾಗಿ,
ನೀನು ವಚನವಿತ್ತಿದ್ದೆ ನನಗೆ.

## XLIX

ಎಂಥ ಯಾತನೆ, ಓ ಸ್ವಾಮಿ!
ಬಿರಟೆ ತಿರುಗಿಸಿ ನೀನು
ಶೃತಿಗೂಡಿಸುವಾಗ.

ಶುರುವಾಗಲಿ ರಾಗಾಲಾಪನೆ,
ಯಾತನೆಯ ಮರೆಯುವೆ
ಸ್ವರ ಮಾಧುರ್ಯದಲಿ,
ಕಷ್ಟವಿತ್ತ ದಿನಗಳಲಿ,
ನಿನ್ನ ಇಂಗಿತ ಏನಿತ್ತು
ಎನ್ನುವುದ ಅರಿಯುವೆ,
ಇಂದಿನ ನಾದ ಸುಖದಲಿ.

ಬೆಳಕಿನ ರಭಸಕ್ಕೆ
ಹಿಮ್ಮೆಟ್ಟುತಿದೆ ರಾತ್ರಿ,
ಹೋಗಲಿ ಅವಳು
ರಾಗದ ಗುಂಗಿನಲ್ಲಿ,
ನನ್ನ ದಮನಿಗಳಲ್ಲಿ
ಹರಿಸು ನಿನ್ನಾತ್ಮವ, ಓ ಸ್ವಾಮಿ!
ತಾರೆಗಳಿಂದ ಅವತರಿಸಿದ
ಸ್ವರ ಸಂಯೋಜನೆಯ.

# ಮಿಂಚು ಹುಳುಗಳು

ಮೂಲ : ರವೀಂದ್ರನಾಥ ಟ್ಯಾಗೋರ್
ಅನು : ಜರಗನಹಳ್ಳಿ ಶಿವಶಂಕರ್

1

ಆಕಾಶ
ರಾತ್ರಿಯೆಲ್ಲ ಎಣಿಸುವುದು
ಅಗಣಿತ ತಾರಾಮಣಿಗಳ
ಧ್ಯಾನಿಸುತ್ತ ಸೂರ್ಯನ.

2

ಕಡಲ ತೀರ ಪಿಸುದನಿಯಲ್ಲಿ ಕೇಳುತ್ತದೆ ಸಾಗರವನ್ನು:
"ಬರೆದು ತಿಳಿಸು ಅಲೆಗಳು ಹೇಳಲು ಪರಿತಪಿಸುವುದನ್ನು"
ಸಾಗರ ಮತ್ತೆ ಮತ್ತೆ ನೊರೆ ಬುರುಗಿನಲ್ಲಿ ಬರೆಯುತ್ತೆ
ಬರೆ ಬರೆದು ಅಳಿಸುತ್ತೆ, ಉಳಿಸುತ್ತೆ ನಿರಾಶೆಯ ಸಾಲುಗಳನ್ನು.

3

ಮಲ್ಲಿಗೆಗೆ ಗೊತ್ತು
ಸ್ವರ್ಗದಲ್ಲಿ
ಸೂರ್ಯ ಸಹೋದರ
ನಗುತ್ತಾನೆಂದು.

4

ಮೋಡಗಳ ನಡುವೆ
ಕಾಮನಬಿಲ್ಲು
ಇರಬಹುದು ಮೋಹಕ
ಗಿಡಗಂಟೆಗಳ ನಡುವೆ
ಸಣ್ಣ ಬಣ್ಣದ ಚಿಟ್ಟೆ
ಅದೆಷ್ಟು ಆಕರ್ಷಕ.

5
ನನ್ನ ಬಾಳು
ಖಾಲಿ ಕೊಳಲು
ಕಾಯುತ್ತಿದೆ ನಾದಗಳಿಗೆ
ಕಾಯುವಂತೆ ಕತ್ತಲು
ನಕ್ಷತ್ರಗಳಿಗೆ.

6
ಒಲವು ತುಂಬಿದ
ಗುಡಿಯ ಕಟ್ಟಲು
ಕಾದಿದ್ದಾನೆ ದೇವರು;
ಕಲ್ಲುಗಳ ಹೊತ್ತು
ತಂದರು ಮಾನವರು.

7
ಸುಳ್ಳುಗಳು ಬದುಕುತ್ತವೆ
ಸತ್ಯದ ಮನೆಯ ಪಕ್ಕದಲ್ಲಿ
ಆದುದರಿಂದಲೆ
ಅವುಗಳಿಗೆ ಅಷ್ಟು ದರ್ಪ.

8
ಬೆಂಕಿ ಅರಳುವುದು
ಸುಂದರ ಹೂಗಳಾಗಿ
ಬಾಣ ಬಿರುಸಿನಲ್ಲಿ;
ಲಜ್ಜೆಗೇಡಿ ಜ್ವಾಲೆ
ಸದಾ ಸಾಯುವುದು
ಬರಡು ಬೂದಿಯಲ್ಲಿ.

9
ಮೋಡಗಳು
ಸುಖದ ಕತ್ತಲಲ್ಲಿ

ಮುಳುಗುತ್ತವೆ
ಮರೆತು
ತಾವೆ ಸೂರ್ಯನ
ಮರೆ ಮಾಡಿಕೊಳ್ಳುತ್ತವೆ.

**10**

ಬೆಳಕು
ಕಂಡುಕೊಳ್ಳುವುದು
ತನ್ನ ಬಣ್ಣಗಳ ಖಜಾನೆ
ವೈರಿಗಳಾದ
ಮೋಡಗಳಿಂದಲೆ.

**11**

ಅಸಂಖ್ಯಾತ
ಮುಳ್ಳುಗಳ ನಡುವೆ
ನಗುವ ಹೂವಿಗಿಲ್ಲ
ಒಬ್ಬಂಟಿ ಎನುವ
ಹೊಟ್ಟೆ ಉರಿ.

ಉರ್ದು ಏಕಾಂಕ ನಾಟಕ

# ಪಾಲಿಹಿಲ್‌ನಲ್ಲೊಂದು ರಾತ್ರಿ

*ಮೂಲ : ಖುರ್ರತುಲೈನ್ ಹೈದರ್*
*ಅನು : ಸಂಧ್ಯಾ ಎಸ್.*

(ಎಲ್ಲಾ ಪಾತ್ರಗಳೂ ಕಾಲ್ಪನಿಕ, ಯಾವುದೇ ಮೃತ ಅಥವಾ ಜೀವಂತ ವ್ಯಕ್ತಿಗಳಿಗೆ ಸಾಮ್ಯ ಹೊಂದಿರುವುದಿಲ್ಲ)

ಪಾತ್ರವರ್ಗ : ಹೊಮಾಯ್ ಜಂಕ್‌ವಾಲಾ
ರೊದಾಬಾ ಜಂಕ್‌ವಾಲಾ
ಫಿರೋಜಾ ಚಿಕ್ಕಮ್ಮ
ದಾರಾ ಕಾಜ಼ಿಮ್‌ಜ಼ಾದೆ
ಗುಲ್‌ಚೆಹ್ರ್ ಇಸ್‌ಫನ್‌ದಿಯಾರಿ

*(ಮುಂಬೈಯ ಪಾಲಿಹಿಲ್‌ನಲ್ಲಿ ೧೯೭೬ರ ಜುಲೈ ತಿಂಗಳ ಒಂದು ಸಂಜೆ)*

*ಹಳೆಯ ಕಾಲದ ಒಂದು ಮನೆಯಲ್ಲಿ ನಡುಮನೆ ಮತ್ತು ಊಟದ ಕೋಣೆ ಎರಡೂ ಆಗಿರುವ ಭಾಗ. ಹಿಂದಿನ ಗೋಡೆಯ ಮಧ್ಯಕ್ಕೆ ಒಂದು ಕಿಟಕಿ. ಕೆತ್ತನೆ ಮಾಡಿದ ಗೋವಾ ಪ್ರದೇಶದ ಆಸನಗಳು. ಚೀಣಾದ ಹೂದಾನಿಗಳು, ಕರ್ಪೂರದ ಡಬ್ಬಿ. ಒಂದು ಸೋಫಾ, ಮೂರು ಕುರ್ಚಿ ಮತ್ತು ಕಿಟಕಿ ಹತ್ತಿರ ಒಂದು ಕಾಟೇಜ್ ಪಿಯಾನೊ, ಮೊಟ್ಟೆಯಾಕಾರದ ಗಿಲೀಟಿನ ಕಟ್ಟಿನೊಳಗೆ ವಿಶೇಷ ಕಳೆಯ ಹಿರಿಯ ದಂಪತಿಗಳಿರುವ ಭಾವ ಚಿತ್ರ ಸೋಫಾದ ಹಿಂದೆ. ಚೀಣಾದ ಹಡಗಿನ ಮಾಡೆಲ್ ಪಕ್ಕಕ್ಕೆ ಪಿಯಾನೊದ ಮೇಲೆ ನಸುನಗುತ್ತಿರುವ ಸುಂದರ ಯುವಕನ ದೊಡ್ಡ ಭಾವಚಿತ್ರ. ಕಿಟಕಿಯ ಬಲಕ್ಕೆ ಮೂವರಿಗೆ ಸಜ್ಜಾದ ಡೈನಿಂಗ್ ಟೇಬಲ್, ಬಳಿಯಲ್ಲಿ ಒಂದೆರಡು ಕುರ್ಚಿಗಳು. ಟೋಬಿ ಮಗ್‌ಗಳು, ಅಪರೂಪದ ವಸ್ತು ಸಂಗ್ರಹಗಳು ಮತ್ತೆ ಎರಡನೆ ಎಲಿಜಬೆತ್ ರಾಣಿಯ ಹಾಗೂ ಇರಾನಿನ ಶಾಹ್ ಮತ್ತು*

*ಶಾಹ್‌ಬಾನೋಗಳ ಚಿತ್ರಗಳು ಪಕ್ಕದ ಗೋಡೆಗೆ. ಕಿಟಕಿಯ ಮೇಲೆ ಹಾಡುವ ಹಕ್ಕಿಗಳಿರುವ ಗೋಡೆ ಗಡಿಯಾರ. ನೋಡುಗರಿಗೆ ಬೆನ್ನು ತಿರುಗಿಸಿ ಕಿಟಕಿಯ ಬಳಿ ನಿಂತಿದ್ದಾಳೆ ನಡುವಯಸ್ಸಿನ ಹೊಮಾಯ್. ಕಪ್ಪು ಕಿಮೋನೊ ತೊಟ್ಟಿದ್ದಾಳೆ. ಅವಳ ತಂಗಿ ರೊದಾಬಾ "ಆನ್ ರಿಚ್‌ಮಂಡ್ ಹಿಲ್ ದೇರ್ ಲಿವ್ಡ್ ಎ ಲಾಸ್" ನುಡಿಸುತ್ತಿದ್ದಾಳೆ.*

ಹೊಮಾಯ್ : (ಒರಟು ದನಿಯಲ್ಲಿ) ನನ್ನ ಡಿಸ್ಟರ್ಬ್ ಮಾಡಬೇಡ ರೂದೀ. ನಾನು ಪ್ರಾರ್ಥನೆ ಮಾಡಬೇಕೂಂತ ಎಷ್ಟು ಪ್ರಯತ್ನ ಮಾಡ್ತಿದ್ದೀನಿ.

*(ರೊದಾಬಾ ಈಗ "ಇನ್ ದಿ ಲಾಸ್ಟ್ ರೋಸ್ ಆಫ್ ಸಮರ್ ಲೆಫ್ಟ್ ಬ್ಲೂಮಿಂಗ್ ಅಲೋನ್" ನುಡಿಸಲು ಶುರು ಮಾಡುತ್ತಾಳೆ.)*

ಹೊಮಾಯ್ : ರೂದೀ, ಈಗಾಗಲೆ ಕತ್ತಲಾಗಿದೆ. ಹುಣ್ಣಿಮೆ ಚಂದ್ರ ಬಂದಿದ್ದಾನೆ. ನಾನೀಗ "ಮಾಹ್ ಯಾನಾಯಿಶ್...." ಹೇಳಿಕೊಳ್ಳಬೇಕು. ಜೋರು ಮಳೆ ಬರುವ ಹಾಗಿದೆ. ಪಾಪ, ಪೊಶಾಂಗ್ ಹೇಗೆ ಬರುತ್ತಾನೊ?

*(ರೊದಾಬಾ ಹಾಡು ನುಡಿಸುವುದನ್ನು ಮುಂದುವರಿಸುತ್ತಾಳೆ. ಅಚಿಕಡೆ ಮಳೆ ಸುರಿಯ ತೊಡಗುತ್ತದೆ. ಮಿಂಚು ಹೊಡೆಯುತ್ತದೆ. ಯಾರೋ ಮಾಳಿಗೆಯ ಮೇಲೆ ಟಪಟಪ ಶಬ್ದ ಮಾಡುತ್ತಿದ್ದಾರೆ. ದೂರದಲ್ಲಿ ಬೆಕ್ಕುಗಳ ಕೂಗಾಟ, ಬಿರುಮಳೆಯ ಶಬ್ದ ಹೆಚ್ಚುತ್ತದೆ)*

ಹೊಮಾಯ್ : (ದೇವರ ೧೦೧ ನಾಮಗಳನ್ನು ಜೋರಾಗಿ ಪಠಿಸುತ್ತಾ) ಯಾಜ್ದ್.... ಹರ್‌ವಸ್ಪ್‌ತ್ವಾನ್.... ಹರ್‌ವಸ್ಪ್ ಆಗಾಹ್.... ಹರ್‌ವಸ್ಪ್ ಖೋದಾ ಅಭ್ಝಾ...... ಪರ್ವಾರ.... ಖಾರೊಶೆದ್ತಂ..... ಹರ್‌ಯಾಮ್ದ್....... ಹರ್‌ನೇಕ್ ಫರಾ....... ಫರ್‌ಮಸ್‌ಕಸ್ ಅಫರ್‌ಮೊಷ್....... ಅಫ್ರುಜ್ದ್.... ಅದರ್‌ಬದ್ಗರ್ದ್.....

ರೊದಾಬಾ : (ಈಗ 'ದಿ ಓಲ್ಡ್ ಕೆನ್‌ಟಕಿ ಹೋಮ್' ನುಡಿಸುತ್ತಾ ತಲೆಯಾಡಿಸುತ್ತಾ ಹಾಡಲು ಶುರುಮಾಡುತ್ತಾಳೆ) "ಅಳಬೇಡವೇ ಪ್ರಿಯೆ..... ಈ ದಿನ ಇನ್ನು ಅಳಬೇಡವೆ... ಓಲ್ಡ್ ಕೆನ್‌ಟಕಿ ಹೋಮ್ ಹಾಡನ್ನ ಈ ದಿನ ನಾವು ಹಾಡೋಣವೆ..... ದೂರದ ಕೆನ್‌ಟಕಿ ಹೋಮ್ ಹಾಡನ್ನು ಹಾಡೋಣವೆ...."

ಹೊಮಾಯ್ : (ಬೆರಳುಗಳಿಂದ ಕಿವಿ ಮುಚ್ಚಿ ಏರಿಳಿತವಿಲ್ಲದ ಗಟ್ಟಿ ದನಿಯಲ್ಲಿ ಪಠಿಸಲು ತೊಡಗುತ್ತಾಳೆ). ಅದರ್‌ಸಮ್‌ಗರ್..... ಬದ್‌ಸಮ್‌ಸಗರ್......

ಬಾದಿಗುಲ್ಲಾರ್....... ಆಗುಮಸ್........ ಅಜ್‌ಮನ್...........
ಫಿರೊಜೆಗರ್...... ದಾದರ್....... ನಯಫಿದ್ ಖಿರದ್‌ಮಂದ್......
ದವರ್.........

*(ಜೋರಾಗಿ ಬಾಗಿಲು ಬಡಿದ ಶಬ್ದ)*

**ರೊದಾಬಾ** : (ತಾನು ಕೂತಿದ್ದ ಸ್ಟೂಲಲ್ಲೇ ತಿರುಗಿ) ಯಾರೋ ಬಂದರು!

*(ಕರೆಗಂಟೆ ಒತ್ತಿದ ಶಬ್ದ. ಹೊಮಾಯ್ ಬಾಗಿಲಿಗೆ ಹೋಗಿ ಎಚ್ಚರದಿಂದ ತೆರೆದು ಹಣಕಿ ನೋಡಿ ರೊದಾಬಾ ಕಡೆ ತಿರುಗುತ್ತಾಳೆ)*

**ಹೊಮಾಯ್** : ಯುವ ವಿದೇಶಿಯರು!

**ರೊದಾಬಾ** : ಹಿಪ್ಪಿಗಳೆ?

**ಹೊಮಾಯ್** : ಅಲ್ಲ, ಯಾರೋ ಮೇಲುವರ್ಗದ ಇಂಗ್ಲಿಷ್ ದಂಪತಿಗಳಿದ್ದ ಹಾಗಿದೆ.

*(ಬಾಗಿಲು ತೆಗೆಯುತ್ತಾಳೆ. ಒಬ್ಬ ಯುವಕನೂ, ಒಬ್ಬ ಯುವತಿಯೂ ಹಿಂಜರಿಯುತ್ತಾ ಪ್ರವೇಶಿಸುತ್ತಾರೆ)*

**ಯುವಕ** : (ಆಕ್ಸ್‌ಫರ್ಡ್ ಧಾಟಿಯಲ್ಲಿ) ಥ್ಯಾಂಕ್ಯೂ ಮ್ಯಾಮ್, ಮೋಸ್ಟ್ ಕೈಂಡ್ ಆಫ್ ಯೂ, ತಮ್ಮಿಂದ ತುಂಬಾ ಉಪಕಾರವಾಯ್ತು. (ಚಿನ್ನದ ಬಣ್ಣದ ಕೂದಲಿನ ಯುವತಿಯ ರೇನ್‌ಕೋಟನ್ನು ಕಳಚುವುದಲ್ಲಿ ನೆರವಾಗುತ್ತಾನೆ. ಅವಳ ಕೈಯಲ್ಲೊಂದು ಪಾರ್ಸಲ್ ಇದೆ. ನೋಡಲು ಶ್ರೀಮಂತ ಪ್ರವಾಸಿಗರಂತೆ ಕಾಣುತ್ತಾರೆ)

**ಹುಡುಗಿ** : (ಅಮೆರಿಕನ್ ಧಾಟಿಯಲ್ಲಿ) ಈ ರೀತಿ ಒಳ ನುಗ್ಗಿದ್ದಕ್ಕೆ ದಯವಿಟ್ಟು ಕ್ಷಮಿಸಿ, ನಾವು ಶ್ರೀಮತಿ ಕುಲ್‌ಸುಮ್ ಜರೀವಾಲಾ ಅವರ ಮನೆ ಹುಡುಕುತ್ತಿದ್ದೇವೆ. ಇಂಥಾ ಮಳೆಯಲ್ಲಿ ಅವರ ಮನೆ ಪತ್ತೆ ಹಚ್ಚುವುದು ಅಸಾಧ್ಯವಾಗಿಬಿಡ್ತು. ಬಹುಶಃ ನೀವಾದರೂ ನಮಗೆ ತಿಳಿಸಬಹುದೇನೋ. ನಿಮ್ಮ ಆಸುಪಾಸಿನಲ್ಲೇ ಈ ಮನೆ ಇದೆಯೆಂದು ಕಾಣುತ್ತದೆ. (ಒಂದು ಚೀಟಿ ತೋರಿಸುತ್ತಾಳೆ. ಹೊಮಾಯ್ ಅವರಿಬ್ಬರನ್ನೇ ಆಶ್ಚರ್ಯದಿಂದ ನೋಡುತ್ತಾ ಸುಮ್ಮನೆ ನಿಂತಿರುತ್ತಾಳೆ - ಯಾವುದೋ ಹಳೆಯದೊಂದು ಸುಂದರವಾದ ಕನಸೊಂದರಿಂದ ಹೆಜ್ಜೆ ಹೊರಗಿಟ್ಟವಳಂತೆ. ರೊದಾಬಾ ರಂಗ ಹಾಯ್ದು ಬಂದು ನಸುನಗುತ್ತಾ ಹುಡುಗಿಯ ಕೈಯ್ಯಿಂದ ಚೀಟಿ ತೆಗೆದುಕೊಂಡು ಕನ್ನಡಕ ಏರಿಸಿಕೊಂಡು ಓದುತ್ತಾಳೆ)

ಹುಡುಗಿ : ಕ್ಯಾಬೀ ಹೇಳಿದ, ಇದು ಪಾಲಿಮಲ ರಸ್ತೆಯಂತೆ.

ರೊದಾಬಾ : ಅಲ್ಲವಲ್ಲ.

ಯುವಕ : ಮ್ಯಾಮ್, ಆ ಟ್ಯಾಕ್ಸಿ ಡ್ರೈವರ್ ಈ ಮಳೆಯಲ್ಲಿ ಇನ್ನು ಮುಂದೆ ಹೋಗೋದಿಲ್ಲ ಎಂದುಬಿಟ್ಟ. ಈ ಬಿರುಮಳೆ ನಿಲ್ಲುವವರೆಗೆ ನಾವು ಇಲ್ಲಿರಬಹುದಾ?

ಹೊಮಾಯ್ : (ಕನಸಿನಿಂದ ಎಚ್ಚೆತ್ತವಳಂತೆ) ಓಹೋ, ಖಂಡಿತಾ. ಒಳಗೆ ಬನ್ನಿ, ಆರಾಮ ಮಾಡಿ. ಬಿಸಿ ಬಿಸಿ ಟೀ ತರುತ್ತೇನೆ, ತಾಳಿ.

*(ಆ ಸುಂದರ ಯುವ ಜೋಡಿ ಹಿಂಜರಿಯುತ್ತಲೇ, ಒಬ್ಬರ ಮುಖ ಒಬ್ಬರು ನೋಡುತ್ತಾ ರಂಗದ ಮಧ್ಯಭಾಗಕ್ಕೆ ಬರುತ್ತಾರೆ)*

ಹುಡುಗಿ : ಓ, ಥ್ಯಾಂಕ್ಸ್! (ಸುತ್ತ ನೋಡುತ್ತ) ಎಷ್ಟು ಸೊಗಸಾದ ನಡುಮನೆ!

ಹೊಮಾಯ್ : ಅಮೆರಿಕಾದವಳೆ?

ಹುಡುಗಿ : ಇಲ್ಲ ಮ್ಯಾಮ್, ಇರಾನಿನವಳು.

ಯುವಕ : (ಸಾಂಪ್ರದಾಯಿಕವಾಗಿ ದೀರ್ಘವಾಗಿ ತಮ್ಮಿಬ್ಬರನ್ನೂ ಪರಿಚಯಿಸುವ ಧಾಟಿಯಲ್ಲಿ) ಖಾನೊಮ್ ಗುಲ್‌ಚೆಹ್ರ್ ಇಸ್‌ಫನ್‌ದಿಯಾರಿ...... ದಾರಾ ಕಾಜಿಮ್ ಜಾದೆ.

ಹೊಮಾಯ್ ಮತ್ತು ರೊದಾಬಾ : ಪ್ಲೀಸ್ಡ್ ಟು ಮೀಟ್ ಯೂ.

*(ಯುವ ಜೋಡಿ ಸೋಫಾ ಮೇಲೆ ಕೂಡುತ್ತಾರೆ. ಗುಲ್‌ಚೆಹ್ರ್ ಪ್ರೇಕ್ಷಕರ ದಿಕ್ಕಿನಲ್ಲಿ ಮುಖ ಮಾಡಿದಾಗ ವಜ್ರ ಖಚಿತ 'ಯಾ ಅಲಿ' ಅಕ್ಷರಗಳುಳ್ಳ ಅವಳ ಸರದ ಪದಕ ಫಳಫಳಿಸುತ್ತದೆ)*

*(ರೊದಾಬಾ ಚಕ್ಕನೆ ಆಚೆ ಹೋಗುತ್ತಾಳೆ)*

ಹೊಮಾಯ್ : (ಕುರ್ಚಿಯೊಂದರಲ್ಲಿ ಕೂರುತ್ತಾ) ಇಂಗ್ಲೆಂಡಿನಿಂದ ಬರುತ್ತಿದ್ದೀರಾ?

ದಾರಾ : ಹೌದು ಮ್ಯಾಮ್, ಲಂಡನ್ನಿಂದ. ನೆನ್ನೆ ರಾತ್ರಿ ಬಂದೆವು. ನಾನು ಆಕ್ಸ್‌ಫರ್ಡ್‌ನಲ್ಲಿ ಓದುತ್ತಿದ್ದೇನೆ. ಗುಲ್‌ಚೆಹ್ರ್ ಯುನೈಟೆಡ್ ಸ್ಟೇಟ್ಸ್‌ನ ಸಾರಾ ಲಾರೆನ್ಸ್‌ನಲ್ಲಿ ಓದುತ್ತಿದ್ದಾಳೆ.

**ಗುಲ್‌ಚೆಹ್ರ್** : ನನ್ನ ಭಾರತೀಯ ಸಹಪಾಠಿಯೊಬ್ಬಳು - ಖಾಜಿದಾ ಜರೀವಾಲಾ ಅಂತ ಅವಳ ಹೆಸರು - ತನ್ನ ತಾಯಿಗೆ ತಲುಪಿಸಬೇಕೆಂದು ಒಂದು ಪತ್ರ ಮತ್ತು ಒಂದು ಪಾರ್ಸಲ್ ಕೊಟ್ಟಿದ್ದಾಳೆ. ಅವಳ ತಾಯಿಯ ಹೆಸರು ಮಿಸೆಸ್ ಕುಲ್‌ಸುಮ್ ಜರೀವಾಲಾ, ಇಲ್ಲಿನ ಪಾಲಿ ಹಿಲ್ಸ್‌ನ ನಿವಾಸಿ. ಅದಕ್ಕೆ ಆ ಮನೆ ಹುಡುಕುತ್ತಾ ಇಲ್ಲಿ ಬಂದೆವು.

**ದಾರಾ** : ಮಿಸ್ ಜರೀವಾಲಾ ತನ್ನ ತಾಯಿಯ ಮನೆಯ ಫೋನ್ ನಂಬರ್ ಕೂಡ ಕೊಟ್ಟಿದ್ದಾರೆ. ಹೋಟೆಲ್ ಸೆಂಟಾರ್‌ನಿಂದ ಫೋನ್ ಮಾಡಿದೆವು. ಆದರೆ ಈ ಮಳೆಯಿಂದ ಲೈನ್‌ಗಳು ಕೆಟ್ಟಿದ್ದವು. (ಕೈಯಲ್ಲಿ ಟೀ ಟ್ರೇ ಹಿಡಿದು ರೊದಾಬಾ ಪ್ರವೇಶ. ಮಧ್ಯದ ಟೇಬಲ್ ಮೇಲೆ ಅದನ್ನು ಇರಿಸುತ್ತಾಳೆ). ಗುಲ್‌ಚೆಹ್ರ್ ಮತ್ತು ನಾನು ಭಾರತವನ್ನು ನೋಡಲು ರಜೆಯಲ್ಲಿ ಬಂದಿದ್ದೇವೆ. (ಹೆಂಗಸರ ಮುಖಗಳ ಮೇಲೆ ಆಸಕ್ತಿಯ ಭಾವ ಕಂಡು ಇನ್ನೂ ವಿವರವಾಗಿ ಮಾತಾಡುತ್ತಾನೆ) ನಾನು ಇವಳ ಕಸಿನ್. ಓದು ಮುಗಿದ ಮೇಲೆ ನಮ್ಮಿಬ್ಬರ ಮದುವೆ ಅಂತ ನಿಶ್ಚಯವಾಗಿದೆ. ಪಶ್ಚಿಮಕ್ಕೆ ಹಿಂತಿರುಗುವ ಮೊದಲು ನಮ್ಮ ತಂದೆತಾಯಿಯರನ್ನು ಕಂಡು ಹೋಗುತ್ತೇವೆ.

**ಹೊಮಾಯ್** : ಯಾವ ಊರು?

**ದಾರಾ** : ಟೆಹ್ರಾನ್.... ಇರಾನ್.

**ಹೊಮಾಯ್** : ಓಹ್, ಹೌದಾ?

*(ದಾರಾ ಕಣ್ಣೆತ್ತಿ ತನ್ನ ರಾಜ-ರಾಣಿಯರಾದ ಮಹಮದ್ ರಾಜಾ ಪಹ್ಲಾರ್ ಮತ್ತು ಫರಾ ಪಹ್ಲೇರಿಯರ ಬಣ್ಣದ ಭಾವಚಿತ್ರವನ್ನು ನೋಡುತ್ತಾನೆ. ಆಶ್ಚರ್ಯ ಸಂತೋಷಗಳೆರಡೂ ಆಗುತ್ತದೆ. ಹೊಮಾಯ್ ತುಂಬಾ ಶಾಂತಳಾಗಿದ್ದಾಳೆ. ಬಹಳ ಕಾಲದ ನಂತರ ಅತಿಥಿಗಳ ಸತ್ಕಾರ ಮಾಡುತ್ತಿದ್ದಾಳೆ, ಆದ್ದರಿಂದ ಅವರೊಂದಿಗೆ ಏನು ಮಾತಾಡಬೇಕೆಂದೇ ತಿಳಿಯುವುದಿಲ್ಲ)*

**ರೊದಾಬಾ** : (ಟೀ ಬಗ್ಗಿಸುತ್ತಾ) ಹೊಮಾಯ್, ನಮ್ಮ ಈ ಸುಂದರ ಅತಿಥಿಗಳಿಗೆ ನಮ್ಮ ಪರಿಚಯ ಹೇಳಿದೆಯಾ? ನಾನು ರೊದಾಬಾ ಜಂಕ್‌ವಾಲಾ. ಇವಳು ನನ್ನ ಅಕ್ಕ, ಮಿಸ್ ಹೊಮಾಯ್ ಜಂಕ್‌ವಾಲಾ (ದಾರಾ ಮತ್ತು ಯುವತಿ ತಲೆ ಹಾಕಿ ನಸುನಗುತ್ತಾರೆ. ರೊದಾಬಾ ಗೋಡೆ ಮೇಲಿನ ಭಾವಚಿತ್ರಗಳತ್ತ ಕೈ ತೋರಿ) ಅವರು ನಮ್ಮ ತಂದೆ ತಾಯಿ -

ಸರ್ ಅರ್‌ದೇಶಿರ್ ಕೈಕಾವುಸ್ ಮತ್ತು ಲೇಡಿ ಜಂಕ್‌ವಾಲಾ. (ದಾರಾ ಮತ್ತು ಗುಲ್‌ಚೆಹ್ರ್ ಕುತೂಹಲದಿಂದ ನೋಡುತ್ತಾರೆ)

ರೊದಾಬಾ : (ಪಿಯಾನೊ ಮೇಲಿನ ಸುಂದರ ಯುವಕನ ಭಾವಚಿತ್ರ ತೋರಿಸುತ್ತಾ) ಮತ್ತೆ ಅದು ಹೊಶಾಂಗ್ ಸರೋಶ್ಯಾರ್ ಮಿರ್ಜಾ...... ಹೊಮಾಯ್‌ನ ಮದುಮಗ..... (ಹೊಮಾಯ್ ಯುವತಿಯಂತೆ ಕೆಂಪೇರುತ್ತಾಳೆ. ನಾಚಿಕೆಯಿಂದ ತಲೆ ತಗ್ಗಿಸುತ್ತಾಳೆ. ದಾರಾ ಮತ್ತು ಗುಲ್‌ಚೆಹ್ರ್‌ಗೆ ಆಶ್ಚರ್ಯ. ಮತ್ತೆ ಮಾಳಿಗೆಯನ್ನು ಟಪಟಪ ಕುಟ್ಟಿದ ಶಬ್ದ. ಯುವ ಜೋಡಿ ಮುಖ ಓಂದುತ್ತಾ ಮುಖ ಮುಖ ನೋಡಿಕೊಳ್ಳುತ್ತಾರೆ. ರೊದಾಬಾ ಟೀಕಪ್ಪುಗಳನ್ನು ಅವರಿಗೆ ಕೊಡುತ್ತಾಳೆ).

ದಾರಾ : ಥ್ಯಾಂಕ್ಸ್.... ಹೌ ನೈಸ್ ಆಫ್ ಯೂ.

ರೊದಾಬಾ : ಒಂದು ಚೂರು ಕೇಕ್ ತೆಗೆದುಕೊಳ್ಳಿ, ಹೊಮಾಯ್ ಇವತ್ತು ತಾನೇ ಬೇಕ್ ಮಾಡಿದ್ದಾಳೆ, ಈ ಕಾಟೇಜ್ ಚೀಸ್ ಮತ್ತು ಸ್ಕೋನ್ಸ್ ನಾನೇ ಮಾಡಿದ್ದು.

ದಾರಾ : ಓ ದೇವರೇ! ಕಾಟೇಜ್ ಚೀಸ್ ಮತ್ತು ಸ್ಕೋನ್ಸ್! ನಾನು ಈಗಲೂ ಇಂಗ್ಲೆಂಡಿನಲ್ಲಿ ಇದ್ದೀನಾ!?

ಹೊಮಾಯ್ : (ಸಪ್ಪೆಯಾಗಿ) ನೋಡಪ್ಪಾ ಹುಡುಗ, ಈ ಮನೆಯಿಂದ ಆಚೆ ಹೋದ ಮೇಲೆ ನಿನಗೇ ತಿಳಿಯುತ್ತೆ, ಸ್ಟಾಂಡರ್ಡ್ ಅನ್ನೋದು ಹೇಗೆ ಇಳಿದು ಹೋಗಿದೆ ಅಂತ. ನಿನಗೆ ಮಿಸೆಸ್ ಪೊಚ್‌ಖಾನಾವಾಲಾ ಅವರ ಬಂಗಲೆ ಸಿಗಲೆಂದು ಹಾರೈಸುತ್ತೇನೆ..... ಅದು ಯಾವುದೋ ರಾಕ್ಷಸ ಗಗನಚುಂಬಿ ಕಟ್ಟಡಕ್ಕಾಗಿ ಉರುಳಿ ನೆಲಸಮವಾಗಿಲ್ಲದಿದ್ದರೆ ಸಾಕು. ಮಿಸೆಸ್ ಪೊಚ್‌ಖಾನಾವಾಲಾ ಎಲ್ಲಿರುತ್ತಾರೆಂದು ಹೇಳಿದಿರಿ?.....

ಗುಲ್‌ಚೆಹ್ರ್ : ಮಿಸೆಸ್ ಜರೀವಾಲಾ..........

ಹೊಮಾಯ್ : ಕಾರ್ಟರ್ ರೋಡಾ?

ಗುಲ್‌ಚೆಹ್ರ್ : ಅಲ್ಲ, ಪಾಲಿಮಲ ರಸ್ತೆ. ಆ ಕ್ಯಾಬಿ ಗುಡ್ಡದ ಸುತ್ತ ಸುತ್ತಾಡಿಸಿದ. ಹೋಟೆಲ್‌ನಲ್ಲಿ ಒಬ್ಬರು ಹೇಳಿದ್ದರು, ಆ ಜಾಗ ಇರುವುದು ದಿಲೀಪ್ ಕುಮಾರನ ಮನೆ ಹತ್ತಿರ ಅಂತ. ದಾರಿಯಲ್ಲಿ ಇನ್ನೊಬ್ಬ ಸಿಕ್ಕಿ ನಮ್ಮನ್ನ ರಾಜೇಶ್ ಖನ್ನನ ಬಂಗ್ಲೆ ದಿಕ್ಕಿಗೆ ತಿರುಗಿಸಿದ. ನಾನು ಕ್ಯಾಬಿಗೆ ಹೇಳಿದೆ,

"ಇಲ್ಲಿ ದಿಲೀಪ್ ಕುಮಾರ್, ರಾಜೇಶ್ ಖನ್ನರ ಮನೆಗಳು ದಿಕ್ಸೂಚಿ ಲ್ಯಾಂಡ್‌ಮಾರ್ಕ್‌ಗಳಾಗಿದ್ದಾವೆ" ಅಂತ. ಅದಕ್ಕೆ ಅವನು "ಇಲ್ಲ ಮೇಡಂ, 'ಲ್ಯಾಂಡ್ ಮಾರ್ಕ್'ನಲ್ಲಿದ್ದಿದ್ದು ಮೀನಾಕುಮಾರಿಯ ಮನೆ!" ಅನ್ನುತ್ತಾನೆ. (ನಗುತ್ತಾಳೆ) ಅಂತೂ ಆಮೇಲೆ ರಾಜೇಶ್ ಖನ್ನನ ಮನೆವರೆಗೆ ಬಂದೆವು. ಆಮೇಲೆ ದಾರಿ ತಪ್ಪಿಬಿಟ್ಟೆವು.

**ಹೊಮಾಯ್** : (ಒರಟಾಗಿ) ರಾಜೇಶ್ ಖನ್ನ ಅಂದ್ರೆ ಯಾರದು?

**ರೊದಾಬಾ** : ಹೊಮಾಯ್ ಅಕ್ಕ, ರಾಜೇಶ್ ಖನ್ನ ಅನ್ನುವವನು ಒಬ್ಬ ಭಾರತೀಯ ಸಿನೆಮಾ ನಟ, ದಿಲೀಪ್‌ಕುಮಾರ್ ಕೂಡ ಒಬ್ಬ ನಟ.

**ಗುಲ್‌ಚೆಹ್ರ್** : ಟೆಹ್ರಾನ್‌ನಲ್ಲಿ ನಾನು ಒಂದೆರಡು ಇಂಡಿಯನ್ ಮೂವೀ ನೋಡಿದ್ದೇನೆ. ನನ್ನ ಅಮ್ಮ 'ಸಂಗಂ'ನ ಮೂರು ಸಲ ನೋಡಿದಳು. ಅವಳಿಗೆ ವೈಜಯಂತಿಮಾಲಾ ಮತ್ತು ರಾಜ್‌ಕಪೂರ್ ಅಂದ್ರೆ ಪ್ರಾಣ. ದಾರಾ, ನೆನಪಿದೆಯಾ, ನಾವು ಚಿಕ್ಕವರಿದ್ದಾಗ ಟೆಹ್ರಾನ್‌ನಲ್ಲಿ ಇಂಡಿಯನ್ ಮೂವೀಗಳು ಎಷ್ಟು ಜನಪ್ರಿಯವಾಗಿದ್ದವು ಅಂತ? ನನಗಂತೂ ಆ ಎರಡು ಹಾಡುಗಳು ಇನ್ನೂ ನೆನಪಿವೆ. 'ದೋಸ್ತ್ ದೋಸ್ತ್ ನ ರಹ' ಮತ್ತು 'ಮೇರಿ ಜಾನ್ ಶಬ್ಬಖೈರ್....' (ರೊದಾಬಾ ಕಡೆ ತಿರುಗಿ) ಮಿಸ್ ಜಂಕ್‌ವಾಲಾ, ನಿಮಗೆ ಈ ಹಾಡುಗಳು ಗೊತ್ತಾ?

**ರೊದಾಬಾ** : (ಖಚಿತವಾಗಿ) ಇಲ್ಲ, ನನಗೆ ನೆನಪಿಲ್ಲ.

**ದಾರಾ** : (ಟೀ ಕಪ್ಪುಗಳನ್ನು ಕೆಳಗಿಟ್ಟು, ರಂಗ ಹಾದು ಕಿಟಕಿಯ ಬಳಿ ಹೋಗಿ, ಆಚೆ ನೋಡುತ್ತಾನೆ; ಗುಲ್‌ಚೆಹ್ರ್ ಕಡೆ ತಿರುಗಿ) ಗುಲ್‌ಚೆಹ್ರ್! ಮಳೆ ನಿಂತಿದೆ. ನಮ್ಮ ಈ ದಯಾವಂತ ಆತಿಥೇಯರ ಮನೆಯಿಂದ ಇನ್ನು ನಾವು ಹೊರಡೋಣ. (ಅಕ್ಕ ತಂಗಿಯರು ಸಪ್ಪಗಾದಂತೆ ತೋರುತ್ತದೆ. ದಾರಾ ಹಿಂಜರಿಯುತ್ತಾ ಸುತ್ತ ನೋಡುತ್ತಾನೆ) ಮ್ಯಾಮ್, ನಿಮ್ಮ ಹತ್ತಿರ ಚೀಣಾದ ಅಪರೂಪದ ವಸ್ತುಗಳ ಸುಂದರ ಸಂಗ್ರಹವೇ ಇದೆ!

**ಹೊಮಾಯ್** : (ಒಮ್ಮೆಲೆ ಹೆಚ್ಚಿದ ಹೆಮ್ಮೆಯಿಂದಾಗಿ ಮುಖ ಹೊಳೆಯುತ್ತದೆ) ನಮ್ಮ ಮುತ್ತಾತ ಚೀಣಾ ದೇಶದೊಂದಿಗೆ ವ್ಯಾಪಾರ ಶುರು ಮಾಡಿದರು. ಅವರದೇ ಹಡಗುಗಳು ಚೀಣಾದ ಸಮುದ್ರಯಾನ ಮಾಡುತ್ತಿದ್ದವು.

**ದಾರಾ** : (ಸಂತಸದಿಂದ) ಆಹ್! "ಸ್ಲೋ ಬೋಟ್ ಟು ಚೈನಾ...." ಮತ್ತೆ ಅದೆಲ್ಲಾ! ಓಹ್, ಎಷ್ಟು ಚೆನ್ನಾಗಿದೆ!

ಹೊಮಾಯ್ : (ತನ್ನ ಬಗ್ಗೆ ಎಲ್ಲ ವಿವರಗಳನ್ನು ಅವನಿಗೆ ಹೇಳಲು ಉತ್ಸುಕಳಾಗಿ) ಡಿಪ್ರೆಶನ್‌ಗೆ ಮುಂಚೆ ಈ ಬೀದಿಯಲ್ಲಿರೋ ಹೆಚ್ಚೂ ಕಮ್ಮಿ ಎಲ್ಲ ಬಂಗಲೆಗಳೂ ನಮ್ಮ ವಂಶಕ್ಕೇ ಸೇರಿದ್ದವು. ಆ ಡಿಪ್ರೆಶನ್ ಆದ ಮೇಲೆ ಅವೇ ಮಾರಾಟವಾಗಿಬಿಟ್ಟವು. ಚೀನಾ ದೇಶದ ಜೊತೆಗೆ ನಮ್ಮ ವ್ಯಾಪಾರವೂ ಕೊನೆಯಾಯಿತು.

ದಾರಾ : ನಿಮ್ಮ ತಂದೆತಾಯಿಗಳು ಎಲ್ಲಿದ್ದಾರೆ?

ಹೊಮಾಯ್ : ಈಗಿಲ್ಲ.

ದಾರಾ : ಅಣ್ಣ ತಮ್ಮಂದಿರು?

ಹೊಮಾಯ್ : (ಅದೇ ಏಕತಾನ ದನಿಯಲ್ಲಿ) ಅವರೂ ಈಗಿಲ್ಲ.

ದಾರಾ : ಯಾರಾದರೂ ಹತ್ತಿರದ ಸಂಬಂಧಿಗಳು.....?

ಹೊಮಾಯ್ : ಎಲ್ಲರೂ ತೀರಿಕೊಂಡಿದಾರೆ.

ದಾರಾ : ಓಹ್, ಕ್ಷಮಿಸಿ, ಐ ಆಮ್ ಸಾರಿ.

ಹೊಮಾಯ್ : ಪರವಾಗಿಲ್ಲ ಬಿಡಿ. ನೀವೇನು ಮಾಡುವುದಕ್ಕೆ ಸಾಧ್ಯ?

*(ಮಾಳಿಗೆ ಮೇಲೆ ಟಪಟಪ ಶಬ್ದ)*

ಗುಲ್‌ಚೆಹ್ರ್ : (ಟೀ ಕುಡಿದಿದ್ದು ಮುಗಿಸಿ ದಾರಾ ಕಡೆ ನೋಡುತ್ತಾಳೆ) ದಾರಾ.....

ರೊದಾಬಾ : (ತಕ್ಷಣ) ಇಲ್ಲ, ಇಲ್ಲ, ಇಷ್ಟು ಬೇಗ ಹೋಗಿಬಿಡಬೇಡಿ, ಈ ರಾತ್ರಿ ನಮ್ಮ ಜೊತೆ ಊಟ ಮಾಡಿ.

ದಾರಾ : ಥ್ಯಾಂಕ್ಯೂ ಮ್ಯಾಮ್, ಆದರೆ ತಡವಾಗುತ್ತಿದೆ. ಆಚೆ ಟ್ಯಾಕ್ಸಿ ಕಾಯುತ್ತಿದೆ.

ರೊದಾಬಾ : ಕಳಿಸಿಬಿಡಿ ಅದನ್ನ. ಹೊಶಾಂಗ್ ಬರುವ ಹೊತ್ತಾಯಿತು. ನಿಮ್ಮನ್ನು ನಿಮ್ಮ ಹೋಟೆಲ್ಲಿಗೆ ಕರೆದೊಯ್ಯುತ್ತಾನೆ.

ಹೊಮಾಯ್ : ಸಾಂತಾಕ್ರೂಜ್ ಇಲ್ಲಿಂದ ದೂರವೇನಿಲ್ಲ. ನಮ್ಮ ಹತ್ತಿರ ೧೯೩೩ರ ಮಾಡೆಲ್‌ನ ಪ್ಯಾಕಾರ್ಡ್ ಇದೆ. ಅದನ್ನ ನಾನೇ ಡ್ರೈವ್ ಮಾಡುತ್ತಿದ್ದೆ. ವೀಕ್ ಎಂಡ್‌ನಲ್ಲಿ ಪೂನಾಕ್ಕೆ ಹೋಗುತ್ತಿದ್ದೆವು. ಬೇಸಿಗೇಲಿ ಮಹಾಬಲೇಶ್ವರ, ಮಾತೆರಾನ್‌ಗೂ. ಈಗ ಆರ್ಥ್‌ರೈಟಿಸ್‌ನಿಂದಾಗಿ ಡ್ರೈವ್ ಮಾಡಲು ಆಗಲ್ಲ. ಕಳೆದ ಹದಿನೈದು ವರ್ಷಗಳಿಂದ ಆ

ಮೊಟಾರ್‌ಕಾರ್ ಗರಾಜ್‌ನಲ್ಲೇ ಇದ್ದುಬಿಟ್ಟಿದೆ. ಆದರೆ ಹೊಶಾಂಗ್ ಬರಲಿ ತಾಳಿ. ನಮ್ಮ ಪ್ಯಾಕಾರ್ಡ್‌ನಲ್ಲಿ ನಿಮ್ಮನ್ನು ನಿಮ್ಮ ಹೋಟೆಲ್‌ಗೆ ಕರಕೊಂಡು ಹೋಗಲು ಹೇಳುತ್ತೇನೆ.

ದಾರಾ : (ಕೂಡಲೆ) ಬೇಡ, ತೊಂದರೆ ತಗೋಬೇಡಿ, ನಾವು ನಮ್ಮ ಟ್ಯಾಕ್ಸಿಯಲ್ಲೇ ವಾಪಸ್ಸು ಹೋಗುತ್ತೇವೆ.

ಹೊಮಾಯ್ : (ಬಿಟ್ಟು ಕೊಡುತ್ತಾ) ಆಯ್ತು, ನಿಮ್ಮಿಷ್ಟ. ನಮ್ಮ ಹೊಶಾಂಗ್‌ನೂ ಪಾಪದ ಮುದಿ ಪ್ಯಾಕಾರ್ಡ್‌ನ್ನು ಡ್ರೈವ್ ಮಾಡಕ್ಕೆ ಇಷ್ಟಪಡೋದಿಲ್ಲ. ಬರ್‍ತಾನೆ, ಟ್ಯಾಕ್ಸಿಯಲ್ಲಿ ಹೋಗ್ತಾನೆ.

ಗುಲ್‌ಚೆಹ್ರ : (ಬೇಸರಿಕೆಯ ದನಿಯಲ್ಲಿ) ಮಿಸ್ಟರ್ ಹೊಶಾಂಗ್ ಯಾವಾಗ ಬರ್‍ತಾರೆ?

*(ಹಾಡುವ ಹಕ್ಕಿಯ ಗಡಿಯಾರದಿಂದ ಹಕ್ಕಿ ಹೊರಬಂದು ಕೂಗುತ್ತದೆ)*

ರೊಡಾಬಾ : ಇನ್ನೇನು, ಯಾವುದೇ ಕ್ಷಣದಲ್ಲಿ ಬಂದಿಳಿಯಬಹುದು. ಅವನೊಬ್ಬ ಬ್ರಿಜ್ ಆಟದ ಭೂತ. ಪ್ರತೀ ಸಂಜೆ ವಿಲ್ಲಿಂಗ್‌ಡನ್ ಕ್ಲಬ್ಬಿಗೆ ಹೋಗುತ್ತಾನೆ. ಇಲ್ಲಿಗೆ ೯-೩೦ರ ಸುಮಾರಿಗೆ ಬರುತ್ತಾನೆ. ಬಾಂಬೆಯಲ್ಲಿ ಎಷ್ಟು ಕಾಲ ಇರುತ್ತೀರಾ? ಕ್ಲಬ್ಬಿಗೆ ಒಂದು ದಿನ ನಿಮ್ಮನ್ನ ಕರಕೊಂಡು ಹೋಗು ಅಂತ ಹೊಶಾಂಗ್‌ಗೆ ಹೇಳುತ್ತೇನೆ. ಈಗ ಯಾರೋ ಹೊಸದಾಗಿ ಶ್ರೀಮಂತರಾದವರು ಅದನ್ನು ಕೊಂಡುಕೊಂಡಿದ್ದರೂ ಈ ವಿಲ್ಲಿಂಗ್‌ಡನ್ ಕ್ಲಬ್ ಮಾತ್ರ ಹಳೆಯ ಶೋಭೆಯನ್ನು, ಬ್ರಿಟಿಷ್ ವಾತಾವರಣವನ್ನು ಇವತ್ತಿಗೂ ಉಳಿಸಿಕೊಂಡಿದೆ.

ದಾರಾ : (ಸವಿನಯವಾಗಿ) ಎಷ್ಟು ಕುತೂಹಲಕಾರಿ!

ಗುಲ್‌ಚೆಹ್ರ : ನ್ಯೂ ಇಂಗ್ಲೆಂಡಿನ ಕಂಟ್ರಿಕ್ಲಬ್‌ಗಳ ಥರ ಇದ್ದ ಹಾಗಿದೆ!

ಹೊಮಾಯ್ : ಸರಿಯಾಗಿ ಹೇಳಿದಿರಿ! ಡಿಪ್ರೆಶನ್‌ಗೆ ಮುಂಚೆ ನಮ್ಮ ತಂದೆ ತಾಯಿಗಳ ಜೊತೆ ನಾನು ಅಮೆರಿಕಾಗೆ ಹೋಗಿದ್ದೆ. ನ್ಯೂಯಾರ್ಕ್, ಬೋಸ್ಟನ್, ಫಿಲಡೆಲ್ಫಿಯಾ, ನಯಾಗರ ಫಾಲ್ಸ್... ಎಲ್ಲ. ಹಾಲಿವುಡ್‌ನಲ್ಲಿ ನಾವು ರುಡೋಲ್ಫ್ ವಾಲೆಂಟಿನೋನನ್ನು ಸಹ ಭೇಟಿ ಮಾಡಿದೆವು. ಅವನು ಆಟೋಗ್ರಾಫ್ ಕೊಟ್ಟಿದ್ದಾನೆ. ನನ್ನ ಹತ್ತಿರ ಅದು ಇನ್ನೂ ಇದೆ. ಎಲ್ಲೋ ಸೇರಿಕೊಂಡಿದೆ. (ಉದ್ವೇಗದಿಂದ) ಹುಡುಕಿ ತೋರಿಸಲಾ? (ನಿಲ್ಲುತ್ತಾಳೆ)

ರೊಡಾಬಾ : (ಸಿಟ್ಟಿನಿಂದ) ಈಗ ಅದನ್ನ ಎಲ್ಲಿಂದು ಹುಡುಕುತ್ತೀಯಾ? ಮರೆತು ಬಿಡು ಅದನ್ನ.

ಹೋಮಾಯ್ : (ವಿಧೇಯಳಾಗಿ) ಆಯಿತು. (ಮತ್ತೆ ಕೂರುತ್ತಾ, ದಾರಾಳನ್ನು ಉದ್ದೇಶಿಸಿ) ರೊಡಾಬಾ ಮತ್ತೆ ನಾನು ಶಾಲೆ ಕಲಿತಿದ್ದು ಸ್ವಿಟ್ಜರ್‌ಲೆಂಡಿನಲ್ಲಿ. ನಮ್ಮ ಹೊಶಾಂಗ್ ಕೇಂಬ್ರಿಜ್‌ಗೆ ಹೋದ. ನಿಮ್ಮ ಘರ......

ದಾರಾ : (ತಬ್ಬಿಬ್ಬಾಗಿ) ನಾನು ಇರೋದು ಆಕ್ಸ್‌ಫರ್ಡ್‌ನಲ್ಲಿ.

ಹೋಮಾಯ್ : (ಅನ್ಯ ಮನಸ್ಕಳಾಗಿ) ಪರವಾಗಿಲ್ಲ ಬಿಡಿ, ನಾನೀಗ ಅಡುಗೆ ಮನೆಗೆ ಹೋಗಬೇಕು, ಕ್ಷಮಿಸಿ. (ಎದ್ದು ಬಾಗಿಲಿನಿಂದ ಆಚೆ ಹೋಗುತ್ತಾಳೆ. ರೊಡಾಬಾ ಅವಳನ್ನು ಹಿಂಬಾಲಿಸುತ್ತಾಳೆ. ಆಚೆ ಮತ್ತೆ ಮಳೆ ಬರಲು ಶುರುವಾಗುತ್ತದೆ. ಸಮುದ್ರದ ಮೊರೆತ, ಮಿಂಚು, ದಾರಾ ಕಿಟಕಿ ಬಳಿ ಮತ್ತೆ ಬಂದು ಆಚೆ ನೋಡುತ್ತಾನೆ)

ದಾರಾ : (ಮೆಲ್ಲಗೆ) ಓ ದೇವರೆ! ಆಚೆ ಕಗ್ಗತ್ತಲು, ಇಷ್ಟು ಕತ್ತಲ ರಾತ್ರಿಯನ್ನು ನಾನು ನೋಡಿದ್ದೇ ಇಲ್ಲ. ಭಾರತದ ಮಾನ್ಸೂನ್ ಕಾಲದ ರಾತ್ರಿ! ಸಮುದ್ರ, ಮೋಡ, ರಾತ್ರಿ - ಇವೆಲ್ಲ ಒಂದೇ ಆಗಿಬಿಟ್ಟಿವೆ.. (ಗುಲ್‌ಚೆಹ್ರ ಹೆದರತೊಡಗಿದ್ದಾಳೆ. ದಾರಾ ಬಳಿ ಬಂದು ನಿಲ್ಲುತ್ತಾಳೆ. ಅವಳನ್ನು ರಕ್ಷಿಸುವಂತೆ ತೋಳು ಬಳಸಿ ಹಿಡಿದುಕೊಳ್ಳುತ್ತಾನೆ)

ಗುಲ್‌ಚೆಹ್ರ : ದಾರಾ.....

ದಾರಾ : (ಆಚೆ ನೋಡುತ್ತಾ) ಅಯ್ಯೋ ದೇವರೆ, ನಮ್ಮ ಟ್ಯಾಕ್ಸಿ ಮಾಯವಾಗಿಬಿಟ್ಟಿದೆ!

ಗುಲ್‌ಚೆಹ್ರ : (ತಾನೂ ಕಿಟಕಿಯಿಂದ ಬಗ್ಗಿ ನೋಡಿ) ಇಲ್ಲ ಡಿಯರ್, ಅಲ್ಲೇ ಇದೆ. ಪೋರ್ಟಿಕೋದಲ್ಲಿ. ಆದರೆ ಆಚೆ ಅದೆಷ್ಟು ಕತ್ತಲೆ. ಕೆಳಗೆ ಒಂದಾದರೂ ಲೈಟಿಲ್ಲ. ಈಗ ಹಾಳು ಬಿದ್ದಿರುವ ಈ ಬಂಗಲೆ ಮೊದಲು ಭಾರಿಯಾಗೇ ಇದ್ದಿರಬೇಕು. ಏನಾಶ್ಚರ್ಯ, ಇಂಥದೇ ನವ-ಜಾರ್ಜಿಯನ್ ಮನೆಗಳನ್ನು ನಾನು ಡೀಪ್‌ಸೌತ್‌ನ ಹತ್ತಿ ತೋಟಗಳ ಬಳಿ ನೋಡಿದ್ದೇನೆ.

ದಾರಾ : (ದುಃಖದಿಂದ) ನಮ್ಮ ಆತಿಥೇಯರು ನಮಗೆ ಊಟ ತರುವುದರಲ್ಲಿ 'ಬಿಸಿ'ಯಾಗಿದ್ದಾರೆ.

ಗುಲ್‌ಚೆಹ್ರ್ : ಡಿಲೈಟ್‌ಫುಲ್ ಓಲ್ಡ್ ಲೇಡೀಸ್, ಜೋಡಿ ಮರಕುಟುಕ ಹಕ್ಕಿಗಳ ಥರ ಕಾಣುತ್ತಾರೆ, ಪಾಪ!

ದಾರಾ : (ದುಃಖದಿಂದ) ಗುಲ್‌ಚೆಹ್ರ್, ಮುದಿ ವಯಸ್ಸನ್ನು ಯಾವತ್ತೂ ತಮಾಷೆ ಮಾಡಬೇಡ. ಒಂದಲ್ಲಾ ಒಂದು ದಿನ ನೀನೂ ನಾನೂ ಸಹ ಮುದುಕರಾಗ್ತೀವಿ. ನಾವು ಅಲ್ಲೀವರೆಗೂ ಬದುಕಿದ್ದರೆ.....

ಗುಲ್‌ಚೆಹ್ರ್ : (ತನ್ನ ತಪ್ಪಿಗೆ ನಾಚಿ) ಸಾರಿ, ದಾರಾ.

ದಾರಾ : (ಯೋಚಿಸುವ ದನಿಯಲ್ಲಿ, ನಿಧಾನವಾಗಿ) ಜನಾಂಗಗಳೂ ಜನಗಳಂತೆ ಮುದಿಯಾಗಿ ಬಿಡುತ್ತವೆ. ಆಕ್ಸ್‌ಫರ್ಡ್‌ನಲ್ಲಿರುವ ಭಾರತೀಯ ಪಾರ್ಸಿ ಗೆಳೆಯನೊಬ್ಬ ಹೇಳಿದ, ಇಡೀ ಪ್ರಪಂಚದಲ್ಲಿ ಈಗಿರುವ ಪಾರ್ಸಿಗಳ ಸಂಖ್ಯೆ 'ದಿ ಇಲ್ಲಸ್ಟ್ರೇಟೆಡ್ ವೀಕ್ಲೀ ಆಫ್ ಇಂಡಿಯಾ'ದ ಸರ್ಕ್ಯುಲೇಷನ್‌ಗಿಂತಾ ಕಡಿಮೆಯಿದೆಯಂತೆ....!

ಗುಲ್‌ಚೆಹ್ರ್ : ಅಯ್ಯೋ ದೇವರೆ!

ದಾರಾ : ಇವತ್ತು ನಾವು ಮಲಬಾರ್ ಹಿಲ್‌ನಿಂದ ಕೆಳಗೆ ಬರುತ್ತಿರುವಾಗ ಟ್ಯಾಕ್ಸಿ ಡ್ರೈವರ್ ಒಂದು ಮರದ ಪ್ರಾಕಾರದ ಕಡೆ ತೋರಿಸುತ್ತಾ, ಅದೇ ಪ್ರಸಿದ್ಧವಾದ 'ಟವರ್ ಆಫ್ ಸೈಲೆನ್ಸ್' ಎಂದು ಹೇಳಿದ್ದು ನೆನಪಿದೆಯಾ? ಆಗ ನನಗೆ... ಪಸರ್ಗಾರ್ಡ್, ಪರ್ಸಿಪೊಲಿಸ್, ಸ್ಟೆಸಿಫಾನ್‌ನ ನೆನಪಾಯಿತು... ಕಡೆಗೆ ನೋಡಿದರೆ ಇದು! ದೇವರೆ, ಎಂಥ ವಿಪರ್ಯಾಸ.

ಗುಲ್‌ಚೆಹ್ರ್ : (ವಿಷಾದದಿಂದ) ಹೌದು, ಬಹಳ ದುಃಖದ ವಿಚಾರ.

ದಾರಾ : (ಅದೇ ಆಲೋಚನಾಕ್ರಾಂತ ದನಿಯಲ್ಲಿ) ಇಲ್ಲ, ಅದಕ್ಕೆ ನಾವೇನೂ ವಿಷಾದಿಸಬೇಕಿಲ್ಲ. ನಾವು ಇನ್ನೂ ಇದ್ದೇವಲ್ಲ. ಜೊತೆಗೆ ಈ ಅದ್ಭುತ ಜನಾಂಗ - ನಮ್ಮ ಪುರಾತನ ನಾಗರಿಕತೆಯನ್ನು ಸೃಷ್ಟಿಸಿದ ಈ ಜನಾಂಗದವರೂ ಉಳಿದುಕೊಳ್ಳಬೇಕು. ಸರಿ-ತಪ್ಪುಗಳೆಂಬ ಪರಿಕಲ್ಪನೆಗಳನ್ನು ಜಗತ್ತಿಗೆ ಪರಿಚಯಿಸಿದವರು ಇವರೇ ಅನ್ನೋದನ್ನ ಮರೀಬೇಡ.

*(ಮಳೆ ಕಡಿಮೆಯಾಗುವುದು. ಮಳೆ ನೀರಿನಿಂದ ಮಿಂದ ಚಂದ್ರನ ಹಾಲ್ಬೆಳಕಿನಿಂದ ಕಿಟಕಿ ಮಂದವಾಗಿ ಕಾಣತೊಡಗುತ್ತದೆ. ಬರಬರುತ್ತಾ ಹೆಚ್ಚು ಬೆಳಕಾಗುತ್ತದೆ).*

ದಾರಾ : ಅಲ್ಲಿ ನೋಡು ಗುಲ್‌ಚೆಹ್ರ್, ಎಷ್ಟು ಮಾಟವಾಗಿ ಕಾಣುತ್ತಿದೆ ಕಪ್ಪು ಮೋಡಗಳಿಂದ ಹೊರ ಬರುತ್ತಿರುವ ಆ ಹುಣ್ಣಿಮೆ ಚಂದ್ರ! ಹಿಂದೊಮ್ಮೆ ಈ ಜಾಗ ತುಂಬಾ ಚೆನ್ನಾಗಿದ್ದಿರಬೇಕು.

ಗುಲ್‌ಚೆಹ್ರ್ : ಇಡೀ ಪಾಲಿಹಿಲ್ ಪ್ರದೇಶ ಒಂದೇ ದಶಕದ ಹಿಂದೆ ಸುಂದರವಾದ ಬಂಗಲೆಗಳಿಂದ ತುಂಬಿತ್ತು ಅಂತ ಆ ಕ್ಯಾಬಿ ಹೇಳುತ್ತಿದ್ದನಲ್ಲ, ಅವುಗಳಲ್ಲಿ ಹೆಚ್ಚಿನವನ್ನು ನೆಲಕ್ಕುರುಳಿಸಿ ಈಗ ಆ ಜಾಗಗಳಲ್ಲಿ ಅಪಾರ್ಟ್‌ಮೆಂಟ್ ಬ್ಲಾಕ್ಸ್‌ಗಳನ್ನ ಏರಿಸಿದ್ದಾರೆ. (ತಡೆದು) ದಾರಾ, ಬಾಂಬೆಯ ಈ ಗಗನಚುಂಬಿಗಳನ್ನ ನೋಡಬೇಕೂಂತ ನಾವು ಸ್ಟೇಟ್ಸ್‌ನಿಂದ ಇಷ್ಟು ದೂರ ಬರಲಿಲ್ಲ!

ದಾರಾ : ಗುಲ್‌ಚೆಹ್ರ್, ನಾಳೆ ನಾವು ಜಯಪುರ, ಆಗ್ರಾ, ಡೆಲ್ಲಿ, ಖಜುರಾಹೋ ಕಡೆಗೆ ಹೊರಡೋಣ. ನಿಜವಾದ ಭಾರತವನ್ನು-ರಿಯಲ್ ಇಂಡಿಯಾವನ್ನು-ನಾವು ಒಂದಲ್ಲಾ ಒಂದು ಕಡೆ ಕಂಡೇ ಕಾಣುತ್ತೇವೆ. ಇಷ್ಟು ಬೇಗ ಬೇಸರ ಮಾಡಿಕೊಳ್ಳಬೇಡ. (ಮತ್ತೆ ಮಳೆ ಶುರುವಾಗುತ್ತದೆ. ಟ್ರೇಗಳಲ್ಲಿ ಆಹಾರ ಪದಾರ್ಥಗಳನ್ನು ಮುಚ್ಚಿಟ್ಟುಕೊಂಡು ಹೊಮಾಯ್ ಮತ್ತು ರೊಡಾಬಾ ತರುತ್ತಾರೆ. ಟ್ರೇಗಳನ್ನು ಊಟದ ಟೇಬಲ್ ಮೇಲಿಟ್ಟು ತಮ್ಮ ಖುರ್ಚಿಗಳಿಗೆ ವಾಪಸಾಗುತ್ತಾರೆ. ದಾರಾ, ಗುಲ್‌ಚೆಹ್ರ್ ಇಬ್ಬರೂ ಸೋಫಾಗೆ ಮರಳುತ್ತಾರೆ. ಹೊಮಾಯ್ ತುಂಬಾ ಶಾಂತಳಾಗಿ ತನ್ನ ಕೈಗಳನ್ನೇ ನೋಡಿಕೊಳ್ಳುತ್ತಿರುತ್ತಾಳೆ.)

ದಾರಾ : (ನಿಜವಾದ ಭಾವನೆಯಿಂದ) ಮ್ಯಾಮ್, ನಿಮ್ಮಿಬ್ಬರ ಕೈಗಳು ಎಷ್ಟು ಕೋಮಲ, ಸುಂದರವಾಗಿವೆ.... ಪುಟ್ಟಿದಾಗಿವೆ...... ಅವು ಕೇವಲ ಪಿಯಾನೋ ನುಡಿಸಲು ಅಥವಾ ಕಸೂತಿ ಮಾಡಲು ಮಾತ್ರ ಯೋಗ್ಯವಾಗಿವೆ. (ಅಕ್ಕ ತಂಗಿಯರು ಧನ್ಯತಾ ಭಾವದಿಂದ ಅವನನ್ನು ನೋಡುತ್ತಾರೆ)

ಹೊಮಾಯ್ : (ಕಣ್ಣಲ್ಲಿ ನೀರು ತುಂಬಿಕೊಂಡು) ಡಿಯರ್ ಯಂಗ್‌ಮ್ಯಾನ್, ನೀನು ತುಂಬಾ ಕರುಣಾಳು. ತುಂಬಾ ಸಭ್ಯಸ್ಥ. ಆದರೇನು ಮಾಡುವುದು, ನಮ್ಮ ಅಡುಗೆಯವರು, ಮನೆಯ ಆಳುಕಾಳುಗಳು ನಮ್ಮನ್ನು ತುಂಬಾ ಹಿಂದೆಯೇ ಬಿಟ್ಟು ಹೋದರು. ತುಂಬಾ ವರ್ಷಗಳಿಂದ ನಾವೇ ಅಡುಗೆ ಮಾಡಿಕೊಳ್ಳುತ್ತಿದ್ದೇವೆ. ನಾವೇ ಬಳಿಯೋದು, ನಾವೇ ತೊಳಿಯೋದು.

ದಾರಾ : ನಮಗೆ ಅಡುಗೆ ಮಾಡುವ ತೊಂದರೆ ತೆಗೆದುಕೊಳ್ಳಬಾರದಿತ್ತು. ನಾವು ಹೋಟೆಲ್ಲಿಗೆ ಹೋಗಿ ಆರಾಮಾಗಿ ಅಲ್ಲೇ ತಿನ್ನುತ್ತಿದ್ದೆವು.

ಹೊಮಾಯ್ : ಆ ಮಾತು ನಾನು ಕೇಳೋದಿಲ್ಲ. ಹೊಶಾಂಗ್ ಬರುವ ಹೊತ್ತಾಯ್ತು. ನಾವೆಲ್ಲ ಒಟ್ಟಿಗೆ ಊಟ ಮಾಡೋಣ.

ದಾರಾ : ಹಾಗೆ ಆಗಲಿ, ಥ್ಯಾಂಕ್ಸ್. (ಎದ್ದು ಸುತ್ತ ಓಡಾಡುತ್ತ ಬಿರುಕು ಬಿಟ್ಟಿರುವ ಮಿಂಗ್‌ವಾಸ್‌ಗಳನ್ನು ನೋಡುತ್ತಾನೆ. ಸರ್ ಅರ್‌ದೆಶಿರ್ ಮತ್ತು ಲೇಡಿ ಜಂಕ್‌ವಾಲಾರ ತೈಲದ ಚಿತ್ರಗಳ ಹತ್ತಿರ ನಿಲ್ಲುತ್ತಾನೆ).

ಹೊಮಾಯ್ : (ಹೆಮ್ಮೆಯಿಂದ) ನಮ್ಮ ತಂದೆ ತಾಯಿ. (ಕಣ್ಣೀರು ಒರೆಸಿಕೊಳ್ಳುತ್ತಾಳೆ)

ದಾರಾ : (ಮೆಲ್ಲಗೆ) ಹುಂ, ಹೇಳಿದ್ದೀರಿ. (ಕೂರುತ್ತಾನೆ)

ಹೊಮಾಯ್ : (ನೇರವಾದ, ಏಕತಾನ ದನಿಯಲ್ಲಿ) ೧೯೩೩ಳನೇ ಇಸವಿಯಲ್ಲಿ ಅಪ್ಪ ದಿವಾಳಿಯಾಗಿ ಬಿಟ್ಟಮೇಲೆ, ಇಂಥಾ ಒಂದು ಕಪ್ಪನೆ ಮಾನ್ಸೂನ್ ರಾತ್ರಿ.... ಇದೇ ರೂಮಿನಲ್ಲಿ ಒಂದು ಟವಲ್ ತಲೆಗೆ ಸುತ್ತಿಕೊಂಡು ಹಣೆಯ ಬಲಭಾಗಕ್ಕೆ ಗುರಿಯಿಟ್ಟುಕೊಂಡು ಶೂಟ್ ಮಾಡಿಕೊಂಡು ಬಿಟ್ಟರು.

ಗುಲ್‌ಚೆಹ್ರ್ : (ಹೆದರಿ ದಾರಾ ಬಳಿಸಾರುತ್ತಾಳೆ)

ರೊದಾಬಾ : ಅಮ್ಮನಿಗೆ ಆ ನೋವು ತಡೆದುಕೊಳ್ಳಲು ಆಗಲಿಲ್ಲ. ಕೆಲವೇ ತಿಂಗಳುಗಳಲ್ಲಿ ಅವಳೂ ಸತ್ತುಹೋದಳು. ನಮ್ಮನ್ನು ಸಮಾಧಾನ ಪಡಿಸೋರು ಯಾರೂ ಇರಲಿಲ್ಲ. ನಮ್ಮ ಮನೆತನದ 'ದಸ್ತೂರ್' "ಅಳಬೇಡಿ" ಎಂದು ತಿಳಿಸಿತು. 'ಹೌದಕ್ತ್ ನಸ್‌ಖ್' ಪ್ರಕಾರ, ತೊರೆದು ಹೋದವರಿಗಾಗಿ ಅಳುವುದು ಪಾಪ ಎಂದು ದೇವರು ಮತ್ತು ಪ್ರವಾದಿ ಹೇಳಿದ್ದಾರಂತೆ. ಯಾರೂ - ಸ್ವರ್ಗಕ್ಕೆ ಹಾರಲು ಪ್ರಯತ್ನಿಸಿದ ಬಲರವನೆಹ್ ಕೈಕಾವೂಸ್‌ನಾಗಲಿ, ಸಾವಿಂದ ತಪ್ಪಿಸಿಕೊಳ್ಳಲು ಸಮುದ್ರದ ತಳಗಿನ ಕಬ್ಬಿಣದ ಅರಮನೆಯೊಳಗೆ ಬಚ್ಚಿಟ್ಟುಕೊಳ್ಳಲು ಹವಣಿಸಿದ ಟುರಾನ್‌ನ ಶಾಹ್ ಅಫ್ರ್‌ಸಿಯಾಬ್‌ನಾಗಲಿ ವಿನಾಶದಿಂದ ತಪ್ಪಿಸಿಕೊಳ್ಳಲಾಗಲಿಲ್ಲವಂತೆ. ನಮ್ಮ ತಂದೆ ತಾಯಿಗಳು ತೀರಿಕೊಂಡ ಮೇಲೆ ಎಲ್ಲ ವಿಧಿಗಳನ್ನೂ ಸರಿಯಾಗಿ ನಡೆಸಿದರು; ಅವರ ದೇಹಗಳನ್ನು 'ಟವರ್'ನಲ್ಲಿ ಇರಿಸಲಾಯ್ತು. ಮೂರು ರಾತ್ರಿ ಸತತ ನಮ್ಮ ಮನೆಯಲ್ಲಿ

ದೀಪ ಉರಿಸಿದೆವು. ಆ ಮೊದಲ ಮೂರು ರಾತ್ರಿಗಳಲ್ಲಿ 'ಪವಿತ್ರ ಅವೆಸ್ತಾ'ವನ್ನು ಪಠಿಸದಿದ್ದರೆ ದೇವತೆ ಸರೋಶ್ ಆ ಆತ್ಮಗಳ ಮೊದಲ ಘಟ್ಟದ ಮುಂದಿನ ಪ್ರಯಾಣಕ್ಕೆ ಸಹಾಯ ಮಾಡುವುದಿಲ್ಲವಂತೆ ಗೊತ್ತಾ. ಸತ್ತವರಿಗೆ ಮೊದಲ ಮೂರು ರಾತ್ರಿಗಳೇ ತುಂಬಾ ತ್ರಾಸದಾಯಕವಂತೆ... ಒಂಭತ್ತು ಸಾವಿರ ರಾತ್ರಿಗಳಷ್ಟು ತೋರುತ್ತವಂತೆ. ಗುಂಪುಗಟ್ಟಲೆ ಭೂತ ಪಿಶಾಚಿಗಳು 'ಆ' ಲೋಕ ಹೊಕ್ಕ ಆತ್ಮವನ್ನು ಬೆದರಿಸುತ್ತವಂತೆ. ಆದರೆ ಆ 'ಸೇತುವೆ' ದಾಟಲು ಒಳ್ಳೆಯ ಆತ್ಮಗಳಿಗೆ ಸರೋಶ್ ಸಹಾಯ ಮಾಡುತ್ತಾನೆ. ಆಮೇಲೆ ಪವಿತ್ರವಾದ ಓಹೆಸ್ ಮತ್ತು ಇತರ ದೇವತೆಗಳು ಅದನ್ನು ಸ್ವಾಗತಿಸಿ ಸ್ವರ್ಗಕ್ಕೆ ಬರಮಾಡಿಕೊಳ್ಳುತ್ತಾರಂತೆ. ನಮ್ಮ ಅಮ್ಮ ಮತ್ತು ಅಪ್ಪ ಖಂಡಿತವಾಗಿಯೂ ಸ್ವರ್ಗಕ್ಕೇ ಹೋಗಿದ್ದಾರೆ. (ಕಣ್ಣೀರು ಒರೆಸಿಕೊಳ್ಳುತ್ತಾಳೆ)

ದಾರಾ : (ಗಂಭೀರ ದನಿಯಲ್ಲಿ) ಖಂಡಿತಾ, ಮ್ಯಾಮ್ (ಮತ್ತೆ ಮಾಳಿಗೆಯಿಂದ ಟಪಟಪ ಶಬ್ದ. ಇರಾನೀಯರಿಗೆ ಭಯವಾಗಿ, ತಲೆಯೆತ್ತಿ ನೋಡುತ್ತಾರೆ)

ದಾರಾ : (ಗಂಟಲು ಸರಿಮಾಡಿಕೊಂಡು) ಮ್ಯಾಮ್, ಮೇಲೆ ಬಾಡಿಗೆಯವರು ಇದ್ದಾರಾ? (ಅಕ್ಕ ತಂಗಿಯರಿಬ್ಬರೂ ಮುಖ-ಮುಖ ನೋಡಿಕೊಳ್ಳುತ್ತಾರೆ)

ಹೊಮಾಯ್ : (ರೊದಾಬಾಗೆ) ಹೇಳಿಬಿಡಲೆ? (ರಂಗದ ಹಿಂದೆ ಯಾರೊ ಮಹಡಿ ಇಳಿಯುವ ಸದ್ದು. ರಂಗದ ಬಲಭಾಗದಿಂದ ಒಬ್ಬ ಹಿರಿಯ ಪಾರ್ಸಿ ಹೆಂಗಸು ಪ್ರವೇಶ. ನೋಡಲು 'ಭೂತ'ದ ಹಾಗೆ ಕಾಣುತ್ತಿರುತ್ತಾಳೆ - ಬಿಳೀ ಲೇಸ್‌ಗಳುಳ್ಳ, ಕತ್ತಿನವರೆಗೆ ಪಟ್ಟಿಯಿರುವ ಬ್ಲೌಸ್ ತೊಟ್ಟಿದ್ದಾಳೆ. ಕಪ್ಪು ವೆಲ್ವೆಟ್‌ನ ದೊಡ್ಡ ಅಂಚಿನ ಬಿಳೀ ಚೈನಾ ಸಿಲ್ಕ್ ಸೀರೆಯನ್ನು ಪಾರ್ಸೀ ಶೈಲಿಯಲ್ಲಿ ಉಟ್ಟಿದ್ದಾಳೆ. ವಜ್ರದ ಬ್ರೋಚ್, ಕಿವಿಯೋಲೆ ತೊಟ್ಟಿದ್ದಾಳೆ. ಕೊರಳ ಸುತ್ತ ಮುತ್ತಿನ ಮಾಲೆ. ಬಿಳೀ ಬಣ್ಣದ ನೆಟೆಡ್ ಕೈಚೀಲ ತೊಟ್ಟಿದ್ದಾಳೆ. ಕೋರ್ಟ್ ಶೂಸ್ ಹಾಕಿಕೊಂಡಿದ್ದಾಳೆ. ಬಕಿಂಗ್‌ಹಮ್ ಅರಮನೆಯ ಪಾರ್ಟಿಯೊಂದಕ್ಕೆ ಹೋಗುವವಳ ಹಾಗೆ ಅಲಂಕಾರ ಮಾಡಿಕೊಂಡಿದ್ದಾಳೆ. ವಯಸ್ಸು ಸುಮಾರು ೯೫.

ಹಿರಿಯ ಹೆಂಗಸು: (ಗಟ್ಟಿಯಾದ ಒರಟು ದನಿಯಲ್ಲಿ) ಹೊಮಾಯ್, ರೊದಾಬಾ - ದೇವತೆ ಸರೋಶ್ ಯಾರಿಗೂ ಸಹಾಯ ಮಾಡೋದಿಲ್ಲ. ಬೆಹ್ರಾಮ್ ಯಾಜ್ದ್ ಆಗಲಿ, ಅಹೂರಾ ಮಜ್ದಾ ಆಗಲಿ ಸಹಾಯ ಮಾಡೋದಿಲ್ಲ. ಸುಮ್ಮನೆ

ಭ್ರಾಂತಿಗೆ ಒಳಗಾಗಬೇಡಿ, ಕೇಳಿಸಿತಾ? ಎಲ್ಲಾ ಬರ್‌ಬಾಖೇ ಆಗಿದೆ.... ನರಕವೇ ಆಗಿದೆ. ಸ್ವರ್ಗ ಅನ್ನೋದು ಇಲ್ಲ, ಅರ್ಥವಾಯಿತಾ? ಈ ಮಧ್ಯರಾತ್ರಿ ಹೀಗೆ ನಾನು ಇಳಿದು ಬಂದಿದ್ದು ಇದನ್ನು ತಿಳಿಸೋಕೆ; ಅವನು 'ಸೇತುವೆ' ತಲುಪಿದ್ದಾನೆ, ಮೆಹ್ರ್ ಡಾವರ್ ಎದುರಿಸಿದ್ದಾನೆ. ಈಗ ನಾನು ಮೆಹ್ರ್ ಯಾಜ್ಡ್ ಎದುರುಗೊಳ್ಳುವ ಘಟ್ಟದಲ್ಲಿ ಇದ್ದೀನಿ, ಹೋಗಿ ಬರುತ್ತೇನೆ. 'ಬಾಯ್!' (ರಂಗ ಹಾಯ್ದು ಆಚೆ ಹೋಗುತ್ತಾಳೆ. ಗುಲ್‌ಚೆಹ್ರ್ ಬೆದರಿ ದಾರಾನನ್ನ ಹಿಡಿದುಕೊಂಡಿರುತ್ತಾಳೆ. ರೊದಾಬಾ ಮತ್ತು ಹೊಮಾಯ್‌ರೂ ಕೂಡ ಬೆದರಿದ್ದಾರೆ. ಆ ಮುದಿ ಹೆಂಗಸು ಮಹಡಿ ಹತ್ತುತ್ತಿರುವ ಟಪಟಪ ಸದ್ದು. ಆಮೇಲೆ ಶಾಂತವಾಗುತ್ತಾರೆ)

**ರೊದಾಬಾ** : ('ಶಾಕ್'ನಿಂದ ಎಚ್ಚೆತ್ತು) ಕ್ಷಮಿಸಿ, ಅದು ನಮ್ಮ ಚಿಕ್ಕಮ್ಮ ಫಿರೋಜಾ. ತಲೆ ಸರಿಯಿಲ್ಲ. ಹಿಂದೆ ಲೇಡಿ ಡೈಮಂಡ್‌ಕಟರ್ ಆಗಿದ್ದವಳು. ಅವಳು ಮೊದಲ ಮಹಡಿಯಲ್ಲಿರುತ್ತಾಳೆ, ಒಬ್ಬಳೇ. ೯೫ ವರ್ಷ. ಆದರೂ ತುಂಬಾ ಕೊಬ್ಬು. ಆದರೂ ಅವಳ ಶಕ್ತಿ, ಆರೋಗ್ಯ ನೋಡಿ ಹೇಗಿದೆ! ನಮಗೆ ಕಿರಿಕಿರಿ ಉಂಟು ಮಾಡಬೇಕಂತ ಅವಳು ಯಾವಾಗಲೂ ತನ್ನ ಬೆಡ್‌ರೂಮಿನ ಮರದ ಫ್ಲೋರಿಂಗ್ ಅನ್ನು ತನ್ನ ಕೊಡೆಯ ತುದಿಯಿಂದ ಟಪಟಪ ಕುಟ್ಟುತ್ತಲೇ ಇರುತ್ತಾಳೆ. (ದಾರಾ, ಗುಲ್‌ಚೆಹ್ರ್ ಗಟ್ಟಿಯಾಗಿ ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಳ್ಳುತ್ತಾರೆ).

**ಹೊಮಾಯ್** : (ಅವರ ಕಸಿವಿಸಿಯನ್ನು ಗಮನಿಸಿ) ಹೊಶಾಂಗ್ ಬರುವಷ್ಟರಲ್ಲಿ ನಾನು ನಿಮಗೆ ಆ ಮುದಿ ಫಿರೋಜಾ ಚಿಕ್ಕಮ್ಮನ ಕತೆ ಹೇಳಿ ಬಿಡಬಹುದೇನೋ.

**ರೊದಾಬಾ** : (ಹಟದಿಂದ) ಬೇಡ ಹೊಮಾಯ್, ಸುಮ್ಮನಿರು.

**ಹೊಮಾಯ್** : ಇಲ್ಲ, ಇವರಿಗೆ ಹೇಳಲೇಬೇಕು. (ಯುವ ಜೋಡಿ ಬಾಗಿಲ ಬಳಿ ಹೋಗುತ್ತಾರೆ. ಹೊಮಾಯ್ ಅಸಾಮಾನ್ಯ ಶಕ್ತಿಯಿಂದ ದಾರಾನ ತೋಳು ಹಿಡಿದು ಜಗ್ಗುತ್ತಾಳೆ, ಇಬ್ಬರನ್ನೂ ಕಿಟಕಿ ಕಡೆ ದಬ್ಬುತ್ತಾಳೆ). ಅಗೋ ಅಲ್ಲಿ ಆ ಕರುಕಾದ ಬಂಗಲೆ ಕಾಣಿಸುತ್ತದೆಯೇ?

**ದಾರಾ** : (ತಡವರಿಸುತ್ತಾ) ಹುಂ.... ಹುಂ....

**ಹೊಮಾಯ್** : ಒಂದು ಕಾಲಕ್ಕೆ ಅದು ಲೇಡಿ ಫಿರೋಜಾಳ ಮನೆ. (ರೂಢಿಯೆಂಬಂತೆ ದಾರಾ 'ಎಷ್ಟು ವಿಚಿತ್ರ' ಎಂದುಬಿಡುತ್ತಾನೆ. ತಕ್ಷಣ ಸುಮ್ಮನಾಗುತ್ತಾನೆ).

ಫಿರೋಜಾ ಚಿಕ್ಕಮ್ಮ ನಮ್ಮ ತಾಯಿಗೆ ದೂರದ ಸಂಬಂಧಿ. ಶ್ರೀಮಂತ ತಂದೆ ತಾಯಿಯರಿಗೆ ಒಬ್ಬಳೇ ಮಗಳು. ಹತ್ತೊಂಭತ್ತು ನೂರಾ ಐದನೇ ಇಸವಿಯಲ್ಲಿ ಸ್ವಿಸ್ ಸ್ಕೂಲಿಂದ ವಾಪಸಾದ ಮೇಲೆ ಅವಳಿಗೆ ಸರ್ ಫರೀದೂನ್‌ಜೀ ಡೈಮಂಡ್‌ಕಟರ್ ಅವರ ಜೊತೆ ಮದುವೆ ಯಾಯಿತು. ಅವರು ಬೆಲ್ಜಿಯಂ ದೇಶಕ್ಕೆ ವಜ್ರಗಳನ್ನ ರಫ್ತು ಮಾಡುತ್ತಿದ್ದರು.

ರೊಡಾಬಾ : ಮಕ್ಕಳಿಲ್ಲದ ಇಪ್ಪತ್ತೈದು ವರ್ಷದ ವೈವಾಹಿಕ ಜೀವನದ ನಂತರ ಅವನು ತೀರಿಕೊಂಡ. ಲೇಡಿ ಡೈಮಂಡ್‌ಕಟರ್ ವಿಧವೆ ಕೋಟ್ಯಾಧೀಶ್ವರಿಯಾದಳು.

ಹೊಮಾಯ್ : ಹೊಶಾಂಗ್ ಸರೋಶ್ಯಾರ್ ಮಿರ್ಜಾ ನನ್ನ ಬಾಲ್ಯದ ಗೆಳೆಯ. ಅವರ ತಂದೆ ತಾಯಿ ಬಹಳ ಸಾಮಾನ್ಯ ಜನ. ಅವನ ತಂದೆ ಒಂದು ಬ್ಯಾಂಕಿನಲ್ಲಿ ಕ್ಲಾರ್ಕ್ ಆಗಿದ್ದರು. ಸರ್ ಅರ್‌ದೆಶಿರ್ ಜಂಕ್‌ವಾಲಾರಾ ಮಗಳನ್ನ ಹೇಗೆ ತಾನೆ ಮದುವೆ ಮಾಡಿಕೊಳ್ಳಲು ಅವನಿಗೆ ಸಾಧ್ಯ? ನಮ್ಮ ವಿದ್ಯಾಸಂಸ್ಥೆಯಿಂದ ವಿದ್ಯಾರ್ಥಿ ವೇತನ ಪಡೆದುಕೊಂಡು ಹೆಚ್ಚಿನ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋದ: ಹಿಂತಿರುಗಿ ಬರುವಷ್ಟರಲ್ಲಿ ಅವನೊಬ್ಬ ದೊಡ್ಡ ವ್ಯಕ್ತಿಯಾಗಿರುತ್ತಾನೆ, ನನ್ನ ಕೈ ಹಿಡಿಯಲು ಕೇಳಲು ಸಾಧ್ಯವಾಗುತ್ತದೆ ಎಂಬ ಕಾರಣದಿಂದ. ಅಷ್ಟರಲ್ಲಿ ಈ ಡಿಪ್ರೆಶನ್‌ನಿಂದಾಗಿ ನಾವು ನೆಲ ಕಚ್ಚಿದ್ದೆವು. ನಮ್ಮ ತಂದೆ ತಾಯಿ ತೀರಿಕೊಂಡರು. ನಾವು ಬಡವರಾದೆವು. ೧೯೩೦ನೇ ಇಸವಿಯಲ್ಲಿ ಹೊಶಾಂಗ್ ಇಂಗ್ಲೆಂಡಿನಿಂದ ಹಿಂತಿರುಗಿ ಬಂದ. ಆದರೆ ಕೇಂಬ್ರಿಜ್ ವಿಶ್ವವಿದ್ಯಾಲಯದಿಂದ ಡಿಗ್ರಿ ಪಡೆಯುವಲ್ಲಿ ಸೋತಿದ್ದ. ಹಾಗಾಗಿ ಅವನು ಬಯಸಿದಂಥ ಕೆಲಸ ಸಿಗಲಿಲ್ಲ. ಮೂರು ವರ್ಷ ನಿರುದ್ಯೋಗಿಯಾಗೇ ಇದ್ದ.

ಹೊಮಾಯ್ : ಆಮೇಲೆ ಒಂದು ಸಂಜೆ ಇದೇ ಕಿಟಕಿಯ ಹತ್ತಿರ ನಿಂತು ನನಗೆ ಹೇಳಿದ: "ಪ್ರಿಯ ಹೊಮಾಯ್, ನನಗೆ ಆ ಲೇಡಿ ಡೈಮಂಡ್‌ಕಟರ್‌ನ ಮದುವೆ ಯಾಗಲು ಅನುಮತಿ ಕೊಡು. ಅವಳೀಗಾಗಲೆ ಮುದುಕಿ, ಕಾಯಿಲೆಯಿಂದ ಬಳಲುತ್ತಿದ್ದಾಳೆ. ಬಹಳ ದಿನ ಉಳಿಯಲಾರಳು. ಇನ್ನು ಕೆಲವೇ ವರ್ಷಗಳಲ್ಲಿ ಗೊಟಕ್ ಅಂದುಬಿಡುತ್ತಾಳೆ. ಆಮೇಲೆ ನಾವಿಬ್ಬರೂ ಮದುವೆಯಾಗೋಣ. ನಾವಿಬ್ಬರೂ ಕಷ್ಟದಲ್ಲಿದ್ದೇವೆ. ನಮ್ಮ ಹಣಕಾಸಿನ ತೊಂದರೆಗಳನ್ನು ನಿವಾರಿಸಿಕೊಳ್ಳೋದಕ್ಕೆ ಇದೇ ಸುಲಭವಾದ ದಾರಿ". ನನ್ನ ಕಿವಿಗಳನ್ನು ನಂಬಲು ನನಗೇ ಸಾಧ್ಯವಾಗಲಿಲ್ಲ. ನಾನಂತೂ

ಮೂಕಿಯಾಗಿ ಬಿಟ್ಟೆ, ನನ್ನ ಉತ್ತರಕ್ಕೂ ಕಾಯದೆ ಅವನು ಹೊರಕ್ಕೆ ಹೋದ. ಹುಲ್ಲು ಹಾಸನ್ನು ದಾಟಿ, ಫಿರೋಜಾ ಚಿಕ್ಕಮ್ಮನ ಬಂಗಲೆ ಹೊಕ್ಕ.

**ರೊದಾಬಾ** : ಅಗ್ನಿ ದೇವಾಲಯದಲ್ಲಿ ಅವರಿಬ್ಬರ ಮದುವೆ ಜರುಗಿತು. ರಿಸೆಪ್ಷನ್ ಅನ್ನು ಟರ್ಫ್‌ಕ್ಲಬ್ಬಿನಲ್ಲಿ ಇಟ್ಟುಕೊಂಡಿದ್ದರು. ಅವನೀಗ ನಮ್ಮ ಹೊಶಾಂಗ್ ಚಿಕ್ಕಪ್ಪನಾಗಿಬಿಟ್ಟ. ಫಿರೋಜಾ ಚಿಕ್ಕಮ್ಮನಿಗಂತೂ ತನ್ನ ಅದೃಷ್ಟವನ್ನ ನಂಬುವುದೇ ಕಷ್ಟವಾಯಿತು. ತನ್ನ ಇಳಿ ವಯಸ್ಸಿನಲ್ಲಿ ಇಂಥಾ ಸುಂದರಾಂಗ ಯುವಕನನ್ನು ಮದುವೆಯಾಗಿದ್ದಳು.

**ಹೊಮಾಯ್** : ಬನಾಮ್-ಇ-ಯಾಜ್ಡ್ - ಇನ್ನು ಅವಳು ನೆಗೆದು ಬೀಳೋದನ್ನೇ ನಾನು ಮತ್ತು ಹೊಶಾಂಗ್ ಕಾಯುತ್ತಾ ಕೂತೆವು. ಮದುವೆ ಹೊತ್ತಿಗೆ ಅವಳ ವಯಸ್ಸು ಅರವತ್ತು ಮೀರಿತ್ತು. ಆಗ ನಾನು..... ನಾನು ನಿನ್ನ ವಯಸ್ಸಿನವಳಾಗಿದ್ದೆ ಗುಲ್‌ಚೆಹ್ರ್! ಹೊಶಾಂಗ್ ಅಂತೂ ನಿನ್ನನ್ನು ತುಂಬಾ ಹೋಲುತ್ತಿದ್ದ, ದಾರಾ! (ಯುವ ಜೋಡಿ ಮತ್ತೊಮ್ಮೆ ಬೆದರಿ ಗಟ್ಟಿಯಾಗಿ ಒಬ್ಬರನ್ನೊಬ್ಬರು ಹಿಡಿದುಕೊಳ್ಳುತ್ತಾರೆ)

**ರೊದಾಬಾ** : ಆದ್ರೆ ಈ ಫಿರೋಜಾ ಚಿಕ್ಕಮ್ಮ ಬದುಕೇ ಉಳಿದಳು. ಅರವತ್ತೈದು, ಎಪ್ಪತ್ತು, ಎಂಬತ್ತು. ಪಾಪ, ಹೊಶಾಂಗ್ ಅಂತೂ ಅವಳ ಎ.ಡಿ.ಸಿ. ಥರ ಆಗಿ ಹೋದ. ಫಿರೋಜಾ ಚಿಕ್ಕಮ್ಮ ಅವನಿಗೆ ನಮ್ಮನ್ನು ಸುಮ್ಮನೆ ಕೂಡ ಭೇಟಿ ಮಾಡಬಾರದೆಂದೂ, ಹಾಗೇನಾದರೂ ಮಾಡಿದನೆಂದರೆ ತನ್ನ ಆಸ್ತಿಯನ್ನೆಲ್ಲ ಯಾವುದಾದರೂ ಧರ್ಮಕ್ಕೆ ಬರೆದು ಬಿಡುವುದಾಗಿಯೂ ಹೆದರಿಸಿ ತಾಕೀತು ಮಾಡಿದ್ದಳು. ನಮ್ಮನ್ನು ಕಾಯಲು ಗೂಢಚಾರರನ್ನೂ ಬಿಟ್ಟಿದ್ದಳು.

**ಹೊಮಾಯ್** : ಹೊಶಾಂಗ್ ಬರಬರುತ್ತಾ ಅಸಹಾಯಕನಾಗಿಬಿಟ್ಟ. ಅವಳ ದುಡ್ಡನ್ನ ಪೋಲು ಮಾಡಲು ತೊಡಗಿದ. ರೇಸಂತೆ, ಇಸ್ಪೀಟಂತೆ, ಕುಡಿತವಂತೆ, ಸ್ಟಾಕ್ ಮಾರ್ಕೆಟ್ ಅಂತೆ. ಅವನನ್ನು ಸಂತೋಷವಾಗಿಡಲು ಅವಳೂ ಅವನು ಕೇಳಿ ಕೇಳಿದಷ್ಟು ಚೆಕ್ಕುಗಳನ್ನು ಮೇಲಿಂದ ಮೇಲೆ ಕೊಡುತ್ತಿದ್ದಳು.

**ರೊದಾಬಾ** : ಫಿರೋಜಾ ಚಿಕ್ಕಮ್ಮನಿಗೆ ಎಂಭತ್ತು ವರ್ಷವಾಗುವಷ್ಟರಲ್ಲಿ ಹೊಶಾಂಗ್ ಅವಳನ್ನ ದಿವಾಳಿ ಮಾಡಿಬಿಟ್ಟಿದ್ದ. ತನ್ನ ಆಗನೇ ಹುಟ್ಟು ಹಬ್ಬವನ್ನ ಎಷ್ಟು ಜೋರಾಗಿ ಆಚರಿಸಿಕೊಂಡಳು. ಹದಿನೆಂಟು ಪದರದ ಕೇಕಿನ

ಮೇಲೆ ೧೮ ಮೋಂಬತ್ತಿಗಳು. ಬಾಂಬೆಯ ಅತ್ಯುತ್ತಮ ನೃತ್ಯಗಾರರು ಅವಳ ಅತಿಥಿಗಳ ಮುಂದೆ ಆಡಿದರು. ನಾವಿಬ್ಬರು ಅದನ್ನೆಲ್ಲಾ ಈ ಕಿಟಕಿಯಿಂದ ನೋಡುತ್ತಿದ್ದೆವು.

ರೊದಾಬಾ : ಇದ್ದಕ್ಕಿದ್ದಂತೆ ನಮ್ಮ ಎದುರಿಗೆ ದೊಡ್ಡ ಜ್ವಾಲೆ ಎದ್ದಿತು. ಗಲಾಟೆ, ಹಾಹಾಕಾರ! ಯಾರೋ ಓಡಿ ಬಂದು ಹೇಳಿದರು, ಹೊಶಾಂಗ್ ಮೋಂಬತ್ತಿ ಹತ್ತಿಸುವಾಗ ಒಂದು ಪರದೆಗೆ ಬೆಂಕಿ ಹೊತ್ತಿಕೊಂಡಿತಂತೆ. ಆ ಅನಾಹುತ ಶುರು ಮಾಡಿದ್ದು ಹೊಶಾಂಗ್ ಎಂದು ನನಗೆ ಗೊತ್ತಾಯಿತು. ಅವನಿಗೆ ಅಷ್ಟು ಬೇಸರವಾಗಿತ್ತು! ಫಯರ್ ಎಂಜಿನ್‌ಗಳು ಬಂದವು. ಮರದಿಂದ ಮಾಡಿದ್ದ ಬಂಗಲೆ ಸುಟ್ಟು ಬೂದಿಯಾಗಿತ್ತು. ಈಗಲೂ ಫಿರೋಜಾ ಚಿಕ್ಕಮ್ಮ ಬದುಕುಳಿದುಬಿಟ್ಟಳು. ಅತಿಥಿಗಳೆಲ್ಲ ಆಚೆ ಓಡಿಹೋಗಿದ್ದರು.

ಹೊಮಾಯ್ : ಹೊಶಾಂಗ್ ತಾನು ಬಚಾವ್ ಆದ, ಓಡಿ ಹೋಗಿ ಕಣ್ಮರೆಯಾದ. ಪರದೆಗಳಿಂದ ಸುತ್ತುವರೆದಿದ್ದ ಒಬ್ಬ ವ್ಯಕ್ತಿಯ ಶವ ಊಟದ ಮನೆಯಲ್ಲಿ ಸಿಕ್ಕಿತು. ಮುಖ ಅರ್ಧ ಸುಟ್ಟಿತ್ತು. ಅವನು ಹೊಶಾಂಗ್‌ನನ್ನು ಹೋಲುತ್ತಿದ್ದ. ತಲೆ ಕೆಟ್ಟಿದ್ದ ಫಿರೋಜಾ ಚಿಕ್ಕಮ್ಮ ಅವನೇ ಹೊಶಾಂಗ್ ಎಂದುಕೊಂಡುಬಿಟ್ಟಳು.

ಹೊಮಾಯ್ : ತಕ್ಷಣ ಜೆ.ಜೆ. ಸ್ಕೂಲಿನ ಕಲಾವಿದನೊಬ್ಬನನ್ನು ಕರೆಸಿ ಅವನ ಶವಕ್ಕೆ ಮುಖವಾಡ ಮಾಡಿಸಿದಳು. ಆ ಮನುಷ್ಯನ ಅಂತಿಮ ಸಂಸ್ಕಾರ ಮಾಡಿದಳು. ಪತ್ರಿಕೆಗಳು, 'ಮಿಸ್ಟರ್ ಹೊಶಾಂಗ್ ಸರೊಶ್ಯಾರ್ ಮಿರ್ಜಾ ಅವರು ಅಗ್ನಿಕುಂಡದಿಂದ ತಪ್ಪಿಸಿಕೊಳ್ಳಲಾಗದೆ ದಾರುಣ ಸಾವನ್ನಪ್ಪಿದರು' ಎಂದು ವರದಿ ಮಾಡಿದವು.

ರೊದಾಬಾ : (ತೋರು ಬೆರಳೆತ್ತಿ ಏನೋ ಗಹನವಾದದ್ದನ್ನು ಹೇಳುವಂತೆ) ಸತ್ಯ ನಮಗೆ ಮಾತ್ರ ಗೊತ್ತು. ಆ ಸುದ್ದಿ ಸುಳ್ಳಾಗಿತ್ತು. ಇಡೀ ಪ್ರಪಂಚ ತಿಳಿದದ್ದು ತಪ್ಪು. ಫಿರೋಜಾ ಚಿಕ್ಕಮ್ಮನಿಗೂ ಸತ್ಯ ಗೊತ್ತಿರಲಿಲ್ಲ, ಈಗಲೂ ಅವಳು ಹೊಶಾಂಗ್ ಆ ರಾತ್ರಿ ಸತ್ತು ಹೋದನೆಂದೇ ತಿಳಿದಿದ್ದಾಳೆ.

ಹೊಮಾಯ್ : ಅವಳ ಅರಮನೆ ಬೂದಿಯಾಗಿ ಬಿಟ್ಟಿತು. ಅವಳ ಪಾಲಿಗೆ ಬದುಕಿದ್ದ ಸಂಬಂಧಿಕರೆಂದರೆ ನಾವಿಬ್ಬರು ಅಕ್ಕ ತಂಗಿಯರು. ಹೊಶಾಂಗ್‌ನ ಮದುವೆಯಾದ ಮೇಲೆ ಸುಮಾರು ಇಪ್ಪತ್ತು ವರ್ಷಗಳಿಂದೀಚೆ ಅವಳು ನಮ್ಮನ್ನು ಭೇಟಿ ಮಾಡುವುದನ್ನೇ ನಿಲ್ಲಿಸಿದ್ದಳು. ಆದರೆ ಇದೊಂದು

ದುರ್ಘಟನೆ. ನಾವು ಕರ್ತವ್ಯವೆಂಬಂತೆ ಹೋಗಿ ಹೊಶಾಂಗ್ ಸತ್ತಿದ್ದಕ್ಕೆ ವಿಷಾದ ವ್ಯಕ್ತಪಡಿಸಿ ಬಂದೆವು. ಆಗ ಕಕ್ಕೇಮರದ ಕೆಳಗೆ, ಅರ್ಧ ಸುಟ್ಟು ಹೋಗಿದ್ದ ತನ್ನ ಅಮೂಲ್ಯ ವಸ್ತುಗಳಿಂದ ಸುತ್ತುವರೆದ ಒಂದು ಕುರ್ಚಿಯಲ್ಲಿ ಕೂತಿದ್ದಳು. ಶವದ ಮುಖವಾಡ ಅವಳ ತೊಡೆಯ ಮೇಲಿತ್ತು. ಆ ಕ್ಷಣ ನೋಡೋದಕ್ಕೆ ಕ್ರೂರ ವಿಧಿ ದೇವತೆ ಥರ ಕಾಣುತ್ತಿದ್ದಳು.

**ರೊದಾಬಾ** : ಅಂತೂ ನಾವೇ ಗೆದ್ದೆವು. ನಮ್ಮ ಮನೆಗೆ ಬಂದು ಬಿಡಿ ಎಂದು ಕೇಳಿಕೊಂಡೆವು. ಒರಟುತನ, ಧಿಮಾಕಿಗೇ ಹೆಸರಾದವಳು, ನಮ್ಮನ್ನು ಸಿಟ್ಟಿನಿಂದ ದುರುಗುಟ್ಟಿಕೊಂಡು ನೋಡಿದಳು. ಆಮೇಲೆ ಆ ಶವದ ಮುಖವಾಡವನ್ನು ತೋರಿಸುತ್ತಾ, ತನ್ನ ಧಿಮಾಕಿನ ದನಿಯಲ್ಲಿ ಹೇಳಿದಳು : 'ಹೊಮಾಯ್, ರೊದಾಬಾ! ಈ ದುಷ್ಟ ವ್ಯಕ್ತಿ ಬೆಂಕಿ ಹಚ್ಚಿ ನನ್ನನ್ನು ನಾಶ ಮಾಡಲು ಪ್ರಯತ್ನಿಸಿದ. ತಾನು ಓಡಿ ಹೋಗಬಹುದು, ನಾನು ಸಾಯುತ್ತೇನೆ ಅಂದುಕೊಂಡಿದ್ದ. ಅತಿಥಿಗಳು 'ಹ್ಯಾಪಿ ಬರ್ತ್‌ಡೇ....' ಅಂತ ಹಾಡುತ್ತಿದ್ದಾಗ ಅವನು ಜನಜಂಗುಳಿ ಮಧ್ಯೆ ಮರೆಯಾಗಿಬಿಟ್ಟ. ಕೈಗಳಲ್ಲಿ ಉರಿಯುತ್ತಿದ್ದ ಮೋಂಬತ್ತಿ ಹಿಡಿದು ಹಾಗೆ ಮರೆಯಾಗಿ ಹೋಗುತ್ತಿದ್ದುದನ್ನು ನಾನು ಗಮನಿಸಿದೆ. ಹಿಂಬಾಲಿಸಿ ಹೋದೆ. ಪರದೆಗಳಿಗೆ ಬೆಂಕಿ ಹಚ್ಚತೊಡಗಿದ. ತಡೆಯಲು ಪ್ರಯತ್ನಿಸಿದೆ. ಅವನು ತಪ್ಪಿಸಿಕೊಂಡು ಹೋಗುವ ಮೊದಲೇ ಉರಿಯುತ್ತಿದ್ದ ಆ ಪರದೆಗಳು ಅವನ ಮೇಲೆ ಉರುಳಿಕೊಂಡು ಬೆಂಕಿಯ ಜ್ವಾಲೆಗಳು ಅವನನ್ನೇ ಸುತ್ತುವರಿದವು. ಅಂತೂ, ತಾನು ಉಳಿಕೊಳ್ಳಲಾಗಲಿಲ್ಲ. ಅವನ ಆತ್ಮ ಈ ಕುರುಹನ್ನು ಹಿಂದೆ ಬಿಟ್ಟು ಹೋಗಿದೆ.' ವಿಜಯೋತ್ಸಾಹದಿಂದ ಅದನ್ನು ಎತ್ತಿ ತೋರಿಸಿ ತಿರುಗಿ ತೊಡೆ ಮೇಲೆ ಇಟ್ಟುಕೊಂಡಳು. ಆಮೇಲೆ ನಮ್ಮ ಮಹಡಿಗೆ ಬಾಡಿಗೆದಾರಳಾಗಿ ಬಂದಳು. ಈಗಲೂ ನಮ್ಮನ್ನ ಭೇಟಿಯಾಗೋದಿಲ್ಲ. ಪ್ರತಿ ತಿಂಗಳು ಬಾಡಿಗೆಯನ್ನ ಕವರಿನಲ್ಲಿ ಇಟ್ಟು ಲೆಟರ್‌ಬಾಕ್ಸಿನೊಳಗೆ ಹಾಕುತ್ತಾಳೆ.

**ಹೊಮಾಯ್** : ಕೆಲ ಕಾಲದ ನಂತರ ಆ ಶವದ ಮುಖವಾಡವನ್ನು ಅವಳ ಮಲಗುವ ಮನೆಯಿಂದ ಯಾರೋ ಅಪಹರಿಸಿಬಿಟ್ಟರು. ಅಗ್ನಿ ದೇವಾಲಯಕ್ಕೆ ಹೋಗಿದ್ದ ಅವಳು ತಿರುಗಿ ಬಂದು ನೋಡುತ್ತಾಳೆ, ಅದು ಪತ್ತೆಯೇ ಇಲ್ಲ. ಆ ಮುಖವಾಡ ಕಾಣೆಯಾದಾಗಿನಿಂದ ಅವಳಂತೂ ಪೂರ್ತಿ ಹುಚ್ಚಿಯಾಗಿಬಿಟ್ಟಿದ್ದಾಳೆ. (ಜೋರಾಗಿ ನಗುತ್ತಾಳೆ) ದಾರಾ, ನನ್ನ ಹೊಶಾಂಗ್ ತುಂಬಾ ಬುದ್ಧಿವಂತ. ಈಗ ಮಾರು ವೇಷದಲ್ಲಿ

ಕೊಲಾಬಾದಲ್ಲಿ ವಾಸವಾಗಿದ್ದಾನೆ. ಸಾಯಂಕಾಲದ ಹೊತ್ತು ವಿಲ್ಲಿಂಗ್‌ಡನ್ ಕ್ಲಬ್ಬಿನಲ್ಲಿ ಕಳೆಯುತ್ತಾನೆ. ಪ್ರತಿ ಶನಿವಾರ ರಾತ್ರಿ ನಮ್ಮ ಜೊತೆ ಊಟ ಮಾಡಲು ಕದ್ದು ಬರುತ್ತಾನೆ, ಆಮೇಲೆ ಕೊಲಾಬಾಗೆ ಹೋಗಿಬಿಡುತ್ತಾನೆ. (ಹಕ್ಕಿ ಗಡಿಯಾರ ಒಂಭತ್ತು ಹೊಡೆಯುತ್ತದೆ)

ಹೋಮಾಯ್ : ಅಗೋ! ಅವನು ಬಂದಿದ್ದಾನೆ (ರಂಗದ ಹಿಂದೆ ಹೋಗುತ್ತಾಳೆ. ರೊಡಾಬಾ ಸ್ಟೂಲಿನ ಮೇಲೆ ಕೂತು "ದಿ ವೆಡ್ಡಿಂಗ್ ಮಾರ್ಚ್" ನುಡಿಸ ತೊಡಗುತ್ತಾಳೆ. ಕೆಲ ನಿಮಿಷಗಳ ಮೇಲೆ ಹೋಮಾಯ್ ಒಂದು ಗಾಲಿ ಕುರ್ಚಿ ತಳ್ಳಿಕೊಂಡು ಬರುತ್ತಾಳೆ. ಮೇಣದಿಂದ ಮಾಡಿದ ಆಕೃತಿ ಕಪ್ಪು ಡಿನ್ನರ್ ಸೂಟ್ ತೊಟ್ಟಿದೆ. ಆ ಗಾಲಿಕುರ್ಚಿಯ ಮೇಲೆ ನೆಟ್ಟಗೆ ಕೂತಿದೆ. ದಿವಂಗತ ಹೊಶಾಂಗ್ ಸರೋಶ್ಯಾರ್ ಮಿರ್ಜಾನ ಶವದ ಮುಖವಾಡವನ್ನು ಆ ಪ್ರತಿರೂಪದ ಕತ್ತಿಗೆ ಬಿಗಿಸಲಾಗಿದೆ. ಸತ್ತವನ ವ್ಯಂಗ್ಯನಗೆ ಆ 'ಪ್ಲಾಸ್ಟರ್ ಆಫ್ ಪ್ಯಾರಿಸ್'ನ ಆಕೃತಿಯಲ್ಲಿ ಹೆಪ್ಪುಗಟ್ಟಿದೆ).

*(ದಾರಾ ಮತ್ತು ಗುಲ್‌ಚೆಹ್ರ್ "ಯಾ ಅಲಿ!" ಎಂದು ಕಿರುಚುತ್ತಾ ಆಚೆ ಹೋಗಿಬಿಡುತ್ತಾರೆ. ಕೆಲ ಕ್ಷಣಗಳಲ್ಲಿ ಟ್ಯಾಕ್ಸಿ ಸ್ಟಾರ್ಟ್ ಆಗಿ ಹೋದ ಶಬ್ದ. ರಂಗದ ಹಿಂದಿನಿಂದ ರೊಡಾಬಾ 'ದಿ ವೆಡ್ಡಿಂಗ್ ಮಾರ್ಚ್'ದಲ್ಲಿ ತಲ್ಲೀನ. ಹೋಮಾಯ್ ಒಂದು ನ್ಯಾಪ್‌ಕಿನ್ ಅನ್ನು ಆ ಆಕೃತಿಯ ಕತ್ತಿಗೆ ಕಟ್ಟಿ, ಆ ಕುರ್ಚಿಯನ್ನು ಟೇಬಲ್ ಬಳಿಗೆ ತರುತ್ತಾಳೆ. ಟೇಬಲ್ ಮೇಲಿನ ಮೋಂಬತ್ತಿಗಳನ್ನು ಹಚ್ಚುತ್ತಾಳೆ. ವಿದ್ಯುತ್ ದೀಪಗಳನ್ನು ಆರಿಸಿ ಬಿಡುತ್ತಾಳೆ.)*

ಹೋಮಾಯ್ : (ಸೋಫಾ ಮತ್ತು ಪಿಯಾನೋ ಕಡೆಗೆ ಬೆನ್ನು ತಿರುಗಿಸಿ, ಆಕೃತಿಯ ಮುಂದೆ ಊಟ ಬಡಿಸಿ) ದಾರಾ.... ಗುಲ್‌ಚೆಹ್ರ್.... ಊಟ ಬಡಿಸಿಯಾಯಿತು. ಮೋಂಬತ್ತಿ ಬೆಳಕಿನಲ್ಲಿ ಊಟ ಮಾಡುವುದು! ಎಷ್ಟು ರೊಮ್ಯಾಂಟಿಕ್ ಆಗಿದೆ!

*(ರೊಡಾಬಾ 'ಫೇರಿ ವಾಲ್ಟ್ಜ್' ನುಡಿಸಲು ಆರಂಭಿಸುತ್ತಾಳೆ. ಹೋಮಾಯ್ ಆಕೃತಿಯ ಸೇವೆಯಲ್ಲಿ ಮಗ್ನಳಾಗಿದ್ದಾಳೆ. ರೊಡಾಬಾ ಈಗ 'ಮೂನ್‌ಲೈಟ್ ಸೊನಾಟಾ'ಗೆ ಬದಲಾಯಿಸುತ್ತಾಳೆ. ಆಮೇಲೆ ಇದ್ದಕ್ಕಿದ್ದಂತೆ ಎದ್ದು ಡೈನಿಂಗ್ ಟೇಬಲ್ ಬಳಿ ಬರುತ್ತಾಳೆ. ಅಕ್ಕ ತಂಗಿಯರು ಎದುರು ಬದುರಾಗಿ ಕೂರುತ್ತಾರೆ. ಮಧ್ಯದಲ್ಲಿ ಮೇಣದ ಹೊಶಾಂಗ್. ಮೋಂಬತ್ತಿ ಬೆಳಕಿಂದಾಗಿ ಮೂವರ ನೆರಳುಗಳು ವಿಕಾರವಾಗಿ ಗೋಡೆ ಮೇಲೆ ಕಾಣಿಸುತ್ತದೆ. ಅಕ್ಕತಂಗಿಯರು ಕತ್ತು ಬಗ್ಗಿಸಿ ಜೊರಾಸ್ಟ್ರಿಯನ್ ಊಟದ ಮುಂಚಿನ ಸ್ತೋತ್ರ ಹೇಳಿಕೊಳ್ಳುತ್ತಾರೆ. ಅಹುರ್ ಮಜ್ದಾ - ಆಕಳು, ಕಾಳು, ಮರ, ನೀರುಗಳನ್ನು ಸೃಷ್ಟಿಸಿದವ.*

*ದೇವತೆಗಳಾದ ಖೊರ್‌ದಾದ್ ಮತ್ತು ಅಮರ್‌ದಾದ್‌ಗಳು ನಮ್ಮ ಪ್ರತಿಯೊಂದು ತುತ್ತನ್ನೂ ಅನುಗ್ರಹಿಸಲಿ. ಈ ಆಹಾರ ಜೇನಿನಂತಾಗಿ ನಮಗೆ ಜ್ಞಾನ ನೀಡಲಿ. ಪಾಪ ಕೇಡುಗಳು ಒಂದು ಸಾವಿರ ಸಲ ನಾಶವಾಗಿ ಹೋಗಲಿ.... (ಇಲ್ಲಿ ಅವೆಸ್ತನ್ ಭಾಷೆಯ ಆ ಪ್ರಾರ್ಥನೆಯನ್ನೇ ಬೇಕಾದರೆ ವಾಚಿಸಬಹುದು) ಹೊಮಾಯ್ ತಲೆ ಎತ್ತಿ ಸೋಫಾದ ಕಡೆ ತಿರುಗುತ್ತಾಳೆ)*

**ಹೊಮಾಯ್** : ದಾರಾ.... ಗುಲ್‌ಚೆಹ್ರ್.... ಬನ್ನಿ ಪ್ರಿಯರೆ, ಊಟ ಸಿದ್ಧವಾಗಿದೆ.... ಅರೆ ದೇವರೇ- ಎಲ್ಲಿ ಅವರು? ಹೋಗೇ ಬಿಟ್ಟಿದ್ದಾರೆ.....

**ರೊದಾಬಾ** : ಹೋಗಿ ಬಿಟ್ಟಿದ್ದಾರಾ? (ತಡೆದು) ಒಂದು ಆಶ್ಚರ್ಯದ ವಿಚಾರ. ಅವರಿಬ್ಬರೂ ನಿಜವಾಗಿಯೂ ಯಾರಿರಬಹುದು?

**ಹೊಮಾಯ್** : ಯಾರಾದರೂ ನಮಗೇನು ರೂದೀ, ಅಂತೂ ಹುಚ್ಚರಿರಬೇಕು. ಊಟಕ್ಕೆ ಇರಿ ಅಂದೆವು, ಇಂಥಾ ಕೆಟ್ಟ ಮಳೆಯಲ್ಲೂ ಹೋಗೇ ಬಿಟ್ಟರು. ತಿಕ್ಕಲು ವಿದೇಶೀಯರು.....

**ರೊದಾಬಾ** : ಹೌದು ಡಿಯರ್. ಈ ಪ್ರಪಂಚದಲ್ಲಿ ಹುಚ್ಚರಿಗೆ ಕೊರತೆಯೇ ಇಲ್ಲ. ಈ ಕಾಲದಲ್ಲಿ ನಾವು ತುಂಬಾ ಜಾಗರೂಕರಾಗಿರಬೇಕು. ಎಂತೆಂಥ ತಿಕ್ಕಲುಗಳು ಬೇಕಾದರೂ ಬಂದು ನಮ್ಮ ಸಮಯ ಹಾಳು ಮಾಡಿಬಿಡಬಹುದು.... (ಇದ್ದಕ್ಕಿದ್ದಂತೆ ಕೆಟ್ಟದಾಗಿ ಜೋರಾಗಿ ನಗುತ್ತಾಳೆ).... ಮಾಯವಾಗೋದು ಅಂದ್ರೆ.... ಅವರೇನು ದೆವ್ವಗಳಲ್ಲ ತಾನೆ?

**ಹೊಮಾಯ್** : ತಿಕ್ಕಲು ವಿದೇಶೀಯರು.... ತಲೆ ಕೆಟ್ಟವರು. ಡಿಯರ್ ಹೊಶಾಂಗ್, ಮೊದಲು ಈ ಒಳ್ಳೇ ಸೂಪ್ ಸೇವಿಸು. (ಒಂದು ಚಮಚೆಯಲ್ಲಿ ಸೂಪ್ ಎತ್ತಿ ಸಾವಿನ ಮುಖವಾಡದ ತುಟಿಗಳ ಬಳಿಗೊಯ್ಯುತ್ತಾಳೆ. ಭಯಂಕರ ನಗುವಿನ ಆ ಮುಖವಾಡ ತಟ್ಟೆಯ ಕಡೆ ಬಾಗುತ್ತದೆ. ಆಚೆ ಕಡೆ ಮಳೆ, ಗುಡುಗು, ಮಿಂಚು. ಬೆಕ್ಕುಗಳು ಕೂಗತೊಡಗುತ್ತವೆ. ಕಿಟಕಿಯಿಂದ ಒಮ್ಮೆ ಜೋರಾಗಿ ಗಾಳಿ ಬೀಸಿ ಮೋಂಬತ್ತಿ ಮಿಣಮಿಣಕಿ ಆರಿ ಹೋಗುತ್ತದೆ. ರಂಗ ಹೆಚ್ಚೂಕಮ್ಮಿ ಕತ್ತಲಾಗುತ್ತದೆ. ಮಂದ ಬೆಳಕಲ್ಲಿ ಹೊಮಾಯ್-ರೊದಾಬಾ ಇಬ್ಬರೂ ಸಾವಿನ ಮುಖವಾಡದ ತುಟಿಗಳಿಗೆ ಸೂಪನ್ನು ಎತ್ತಿ ಹಿಡಿಯುತ್ತಿದ್ದಂತೆ ಪರದೆ ಬೀಳುತ್ತದೆ).

●

ಉರ್ದು ಕತೆ

# ನೆನಪಿನ ಸುಳಿ ದಾರಿಗುಂಟ

ಉರ್ದು ಮೂಲ : ಅನ್ವರ್ ಖಾನ್
ಅನು : ಮಹಾಬಲಮೂರ್ತಿ ಕೊಡ್ಲೆಕೆರೆ

ಮಿರ್ಜೀವನಿಗೆ ಬಾಂಬೆಯೆಂದರೆ ತುಂಬಾ ಪ್ರೀತಿ. ಬಾಂಬೇ ನಗರಿಯ ಗಲ್ಲಿ ಗಲ್ಲಿಗಳಲ್ಲಿ, ಬೀದಿಗಳಲ್ಲಿಯೇ ಅವನು ತಾರುಣ್ಯದ ಆಹ್ಲಾದಕರವಾದ ದಿನಗಳನ್ನು ಕಳೆದದ್ದು. ದೀರ್ಘಕಾಲಿಕವಾದ ಲಂಡನ್ ನಗರಿಯಲ್ಲಿನ ಅವನ ವಾಸ್ತವ್ಯದಲ್ಲಿಯೂ ಸದಾ ಕಾಲವೂ ಬಾಂಬೆಯ ಕುರಿತು ಆತ ಯೋಚನೆಗಳಿಂದ ತುಂಬಿಕೊಂಡೇ ಇರುತ್ತಿದ್ದ.

ಆದರೆ ಇದೀಗ ಅವನ ಮನಸ್ಸು ತಾಪಿ ನದಿ ತೀರದ ಮೇಲಿನ ಸೂರತ್ ಪಟ್ಟಣಕ್ಕೆ ಹತ್ತಿರವಾದ ತನ್ನ ಪುಟ್ಟ ಹಳ್ಳಿಯೊಂದನ್ನು ನೆನಪಿಸಿಕೊಂಡು ಆರ್ದ್ರಗೊಂಡಿತ್ತು. ತಾಯ್ನಾಡು ಭಾರತಕ್ಕೆ ಅಭಿಮುಖವಾದ ಅವನ ಪ್ರಯಾಣದ ಈ ಸಂದರ್ಭದಲ್ಲಿ ಅವನಿದ್ದ ವಿಮಾನ ಇನ್ನೇನು ತಾಯ್ನಾಡಿನ ನೆಲವನ್ನು ಸ್ಪರ್ಶಿಸಲಿದೆ ಎಂಬ ಸಂದರ್ಭದಲ್ಲಿ ಒಂದೇ ಸಮನೆ ತನ್ನ ಹುಟ್ಟೂರಾದ ಆ ಪುಟ್ಟ ಹಳ್ಳಿಯ ನೆನಪೇ ಅವನಲ್ಲಿ ಪುಟಗೊಂಡಿರುವುದು ಒಂದು ಸ್ವಾರಸ್ಯವೇ. ದೀರ್ಘಕಾಲದ ನಂತರ ಲಂಡನ್ನಿಂದ ತಾಯ್ನಾಡಿಗೆ ಪ್ರಯಾಣ ಬೆಳೆಸಿದ್ದ.

ಮಿರ್ಜೀವನ ಆ ಪುಟ್ಟ ಹುಟ್ಟೂರು ಬೆಳೆಯುತ್ತಿದ್ದ ಹಳ್ಳಿಯೆಂಬುದೊಂದೇ ಹೆಗ್ಗಳಿಕೆಯಲ್ಲ. ಆ ಹಳ್ಳಿಯ ಪ್ರತಿ ಕುಟುಂಬದಿಂದ ಒಬ್ಬ ಸದಸ್ಯನಾದರೂ ದೂರದ ಬಾಂಬೆಯಲ್ಲಿಯೋ, ತುಂಬಾ ದೂರದ ಲಂಡನ್ನಿನಲ್ಲಿಯೋ, ಇಲ್ಲಾ ಆಫ್ರಿಕಾ ದೇಶದ ಯಾವುದಾದರೊಂದು ನಗರದಲ್ಲಿಯೋ ಹೋಗಿ ಕೆಲಸದಲ್ಲಿರುವುದು ಸಾಮಾನ್ಯವಾಗಿತ್ತು.

ಮಿರ್ಜೀವನಿಗೆ ತನ್ನೂರಿನ ನೆನಪು ವಿಮಾನದಲ್ಲಿ ಬಲವಾಗಿ ಕಾಡುತ್ತ ಊರಿನ ಜೋಪಡಿಗಳನ್ನು, ಬೆಚ್ಚನೆಯ ಪುಟ್ಟ ಮನೆಗಳನ್ನು, ಸುಸಜ್ಜಿತವಾದ ಬಂಗ್ಲಾಗಳನ್ನು ನೆನಪಿಸಿಕೊಂಡು ಹಿಗ್ಗಿದ.

ತಮ್ಮ ಊರಿಂದ ಗುಳೇ ಹೋಗಿದ್ದ ಆ ಊರಿನ ಜನರೆಲ್ಲ ತಿರುಗಿ ಎಂದೋ ಊರಿಗೆ ವಾಪಸಾದಾಗ ತಮ್ಮ ಆ ಪುಟ್ಟ ಹಳ್ಳಿಯಲ್ಲಿ ಕಾಲಕಾಲಕ್ಕೆ ಚಾಲ್ತಿಯಲ್ಲಿದ್ದ ಸುಂದರ

ವಿನ್ಯಾಸದ ಹೊಸ ಮನೆಯನ್ನು ಕಟ್ಟಿಸಿಕೊಂಡು ವಾಸಿಸುವುದು ಒಂದು ಫ್ಯಾಶನ್ನೇ ಆಗಿ ಹೋಗಿತ್ತು ಖುರ್ಷೀದನ ಊರಲ್ಲಿ. ಹತ್ತು ಹದಿನೈದು ವರ್ಷಗಳಷ್ಟು ಕಾಲ ಹೊರಗೆ ದುಡಿದು ಗಳಿಸಿ ಊರಿಗೇ ಬಂದು ಬಿಡುತ್ತಿದ್ದವರು ಅವರೆಲ್ಲ. ಸುಮಾರು ನೂರು ವರ್ಷಗಳಷ್ಟು ದೀರ್ಘ ಅವಧಿಯಿಂದಲೂ ಇದೊಂದು ನಡೆದು ಬಂದ ಸಂಪ್ರದಾಯವಾಗಿತ್ತು ಆ ಊರಲ್ಲಿ.

ಪ್ರತಿ ಮನೆಯೂ ಸುಂದರವಾಗಿದ್ದು ನುಣುಪಾದ ಪೇಂಟಿನ ಅಂದದ ಬಣ್ಣಗಳಿಂದ ಕಂಗೊಳಿಸುತ್ತಿದ್ದವು. ಹಳೆಯ ಮನೆಗಳು ಕೂಡ ಹೊಸ ವಿನ್ಯಾಸದ ಕುಸುರಿಯೊಂದಿಗೆ ಸುಂದರವಾಗೇ ಇದ್ದವು. ಹಾದಿಹೋಕರಿಗೆ ಮನೆಯೆದುರು ನಿಂತು ಈ ವಿನ್ಯಾಸಮಯ ಕುಸುರಿಯ ಸೌಂದರ್ಯವನ್ನು ತುಸು ಹೊತ್ತು ಆಸ್ವಾದಿಸುವುದು ರೂಢಿಯಾಗಿರುತ್ತಿತ್ತು.

ಊರಲ್ಲಿ ಅತ್ಯಾಕರ್ಷಕವಾದ ಶಾಲೆ ಹಾಗೂ ಮಸೀದಿಗಳಿದ್ದವು. ಇಂಥ ಒಂದು ಸುಂದರ ಶಾಲೆಯಲ್ಲಿಯೇ ಖುರ್ಷೀದ್ ತನ್ನ ಬಾಲ್ಯದ ವಿದ್ಯಾಭ್ಯಾಸ ಪೂರೈಸಿದ್ದು.

ಈ ಶಾಲೆಯ ಮುಖ್ಯಸ್ಥ ತುಂಬಾ ಓದಿದವನಾಗಿ ಜ್ಞಾನಸಂಪನ್ನನಾಗಿರುತ್ತಿದ್ದ. ತುಂಬ ಗೌರವದಿಂದ ಇಂಥವರನ್ನು ಶಾಲೆಗೆ ನೇಮಿಸಿಕೊಳ್ಳಲಾಗುತ್ತಿತ್ತು. ಸುಂದರವಾದ ಹೊಸ ಮನೆ ಶಾಲೆಯ ಮುಖ್ಯಸ್ಥನಿಗಾಗಿ ಮೀಸಲಾಗುತ್ತಿತ್ತು. ಆ ಕಾಲದಲ್ಲಿ ಸುಮಾರು ಐದು ನೂರು ರೂಪಾಯಿಗಳ ವರಮಾನವಿತ್ತು ಶಾಲಾ ಮುಖ್ಯಸ್ಥನಿಗೆ. ಹಾಗೆ ನೋಡಿದರೆ ಐದು ನೂರು ಎಂದರೆ ಆ ಕಾಲಕ್ಕೆ ತುಂಬಾ ಹೆಚ್ಚೇ ಎನ್ನಬಹುದಾಗಿತ್ತು. ಯಾಕೆಂದರೆ ಆ ಪುಟ್ಟ ಹಳ್ಳಿಯ ಶಾಲೆಗೆ ಇನ್ನೂ ಹೆಚ್ಚು ದೊರಕುವುದು ಸಾಧ್ಯವೇ ಇರದ ಮಾತು.

ಆ ಊರಿನ ಶಾಲೆಯಲ್ಲಿ ಇಂಗ್ಲೀಷು ಕಲಿಕೆಯ ಮಾಧ್ಯಮವಾಗಿತ್ತಾದರೂ ಉರ್ದು ಕಡ್ಡಾಯವಾಗಿತ್ತು. ಗುಜರಾತಿ ಮಾತೃಭಾಷೆಯಾಗಿದ್ದರೂ ಊರಿನ ಜನ ಉರ್ದುವನ್ನು ತಮ್ಮ ಮಕ್ಕಳಿಗೆ ಹೆಚ್ಚು ಮಮತೆಯಿಂದಲೇ ಕಲಿಸುತ್ತಿದ್ದರು. ಬಹುಶಃ ಉರ್ದು ಭಾಷೆ ಸಂಪರ್ಕ ಭಾಷೆಯಾಗಿ ಊರಿನ ಹಾಗೂ ಭಾರತದ ಇತರ ಊರುಗಳ ಮುಸ್ಲಿಂ ಬಾಂಧವರ ನಡುವೆ ಸೇತುವೆಯಾಗಿ ಕೆಲಸ ಮಾಡುತ್ತಿತ್ತು. ಊರಲ್ಲಿ ಬಹುತೇಕವಾಗಿ ಮುಸ್ಲಿಂ ಜನರೇ ಹೆಚ್ಚಾಗಿದ್ದುದು.

ಸೂರತ್ ಪಟ್ಟಣದಿಂದ ಊರಿನ ಜನ ಉರ್ದು ವರ್ತಮಾನ ಪತ್ರಿಕೆ ತರಿಸಿ ಕೊಳ್ಳುತ್ತಿದ್ದರು. ಲೇಖಕಿಯರು ಬರೆಯುತ್ತಿದ್ದ ಉರ್ದು ಕಾದಂಬರಿಗಳನ್ನು ತುಂಬಾ ಆಸೆಯಿಂದಲೇ ಊರಿನ ಮಹಿಳೆಯರು ಓದುತ್ತಿದ್ದರು. ಊರಿನ ಎಲ್ಲರ ಮನೆಯಲ್ಲೂ ಫಾತಿಮಾ ಮಬೀನ್, ಎ. ಆರ್. ಕತೂನ್, ಹಜೀಬ್ ಇಮ್ತಿಯಾಝ್ ಅಲಿ ಮತ್ತು ಬೇಗಮ್ ಅಬ್ದುಲ್ ಖಾದಿರ್ ಬರೆದ ಕಾದಂಬರಿಗಳು ಓದಸಿಗುತ್ತಿದ್ದವು. ಪುರುಷ ಲೇಖಕರಲ್ಲಂತೂ ಎಂ. ಅಸ್ಲಾಂ, ರಿಯಾಝ್ ಅಹ್ಮದ್ ಜಾಫ್ರಿ, ಇಂತ್‌ಝಾರ್ ಹುಸೇನ್

ಹಾಗೂ ರಶೀದ್ ಅಖ್ತಾರ್ ನದ್ವಿ ಅಂಥವರು ತುಂಬಾ ಜನಪ್ರಿಯ ಲೇಖಕರಾಗಿದ್ದರು, ಆ ಊರವರ ಮಟ್ಟಿಗೆ.

ಒಮ್ಮೆ ಬಾಂಬೆಗೆ ಹೋಗುವುದಿದ್ದಾಗ ತನ್ನ ಸೋದರ ಮಾವ ಹಬೀಬ್ ಅಶರ್‌ರ ಕಾದಂಬರಿಯಾದ ಶೆಹ್ಲಾವನ್ನು ಅವಶ್ಯವಾಗಿ ಖರೀದಿಸಿ ತರುವಂತೆ ಒತ್ತಾಯಿಸಿದ್ದ ಸಂದರ್ಭ ಇದೀಗ ಖುರ್ಷೀದನಿಗೆ ನೆನಪಾಯಿತು. ಖುರ್ಷೀದ್ ತುಂಬಾ ಚಿಕ್ಕವನಿದ್ದ ಆಗ. ತನ್ನೂರಿನ ಜನ ಪ್ರೀತಿಸುತ್ತಿದ್ದ ಲೇಖಕರ ಕೆಲವು ಹೆಸರುಗಳು ಮಾತ್ರ ಖುರ್ಷೀದನ ನೆನಪಿನ ಸುಳಿಯಲ್ಲಿ ಅರಳಿಕೊಂಡಿದ್ದು. ತನ್ನೂರಿನ ಜನರ ಹಾಗೆ ಖುರ್ಷೀದ್ ಕೂಡಾ ಒಳ್ಳೆಯ ಅಭಿರುಚಿಯ ಸಾಹಿತ್ಯ ಪ್ರೇಮಿಯಾಗಿದ್ದ.

ಖುರ್ಷೀದನ ಸೋದರ ಮಾವ ಆ ಹಳ್ಳಿಯಲ್ಲಿ ಒಳ್ಳೆಯ ಒಂದು ಲೈಬ್ರರಿಯನ್ನೇ ಇರಿಸಿದ್ದ. ಸಂಜೆಯ ಹೊತ್ತಿಗೆ ಜನರೆಲ್ಲ ಈ ಲೈಬ್ರರಿಯಲ್ಲಿ ಸೇರಿ ಮೌಲಿಕವಾದ ಚರ್ಚೆಯಲ್ಲಿ ಮುಳುಗಿರುತ್ತಿದ್ದರು. ಪ್ರಚಲಿತ ವಿದ್ಯಮಾನಗಳ ಕುರಿತು ದೊಡ್ಡ ಚರ್ಚೆಯೇ ಇರುತ್ತಿತ್ತು. ಸಾರ್ವಜನಿಕರಿಂದ ದೊಡ್ಡ ಪ್ರಮಾಣದ ವಂತಿಗೆ ಸೇರುತ್ತಿದ್ದುದರಿಂದ ಈತನ ಸೋದರ ಮಾವನಿಗೆ ತುಂಬಾ ಮೌಲಿಕವಾದ ಪುಸ್ತಕಗಳನ್ನು ತನ್ನ ಲೈಬ್ರರಿಗಾಗಿ ದೂರದ ಬಾಂಬೆಯಿಂದ ಖರೀದಿಸಿ ತಂದು ಸಂಗ್ರಹಿಸಲು ಅನುಕೂಲವಿತ್ತು. ಅವೆಲ್ಲ ಇಂಗ್ಲೀಷ್, ಉರ್ದು, ಗುಜರಾತಿ ಗ್ರಂಥಗಳಾಗಿದ್ದುದಲ್ಲದೇ, ಜನಪ್ರಿಯ ಮಾಲಿಕೆಯ Life & Time Series ಕೂಡ ಸೇರಿರುತ್ತಿದ್ದವು. ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾದ ಪೂರ್ಣ ಸೆಟ್ ಕೂಡ ಲೈಬ್ರರಿಯಲ್ಲಿತ್ತು. ಊರವರ ಕೆಲ ಮನೆಗಳಲ್ಲಿ ಕೂಡ ಬ್ರಿಟಾನಿಕಾದ ಈ ಸೆಟ್ ತುಂಬಿಕೊಂಡಿತ್ತು.

ಖುರ್ಷೀದನ ತಂದೆಗಂತೂ, ಚರಿತ್ರೆ, ಇತಿಹಾಸವೆಂದರೆ ತೀರಿತು, ಎಲ್ಲಿಲ್ಲದ ಆಸಕ್ತಿ. ವಿರಳವಾದ ಹಾಗೂ ಹಳೆಯದಾದ 'ತರೀಖ್-ಎ-ತಿಬ್ರಿ', 'ತರೀಖ್-ಎ-ಫರಿಶ್ತಾ', 'ತರೀಖ್-ಎ-ಅಸಾಫಿಯಾ', 'ಸಿರಾತುಲ್ ನಬಿ'ಯಂಥ ಪುಸ್ತಕಗಳು ತಂದೆಯ ಬಳಿ ಇದ್ದವು. ಇವುಗಳ ಜೊತೆಗೇ ಸರ್ ಜಾದುನಾಥ ಸರ್ಕಾರ, ಈಶ್ವರೀ ಪ್ರಸಾದ, ತಾರಾ ಚಂದ್, ಡಿ. ಪಿ. ಮುಖರ್ಜಿ, ಮೌಲಾನಾ ಅರುಫಾದ್ ಮುಂತಾದ ಎಷ್ಟೋ ಪ್ರಸಿದ್ಧರು ಬರೆದ ಪುಸ್ತಕಗಳೂ ಇದ್ದವು.

ನೆಹರೂ ಬರೆದ ಡಿಸ್ಕವರೀ ಆಫ್ ಇಂಡಿಯಾ, ಚರ್ಚಿಲರ ಆಟೋಬಯೊಗ್ರಫಿ ಮತ್ತು ವಾರ್ ಮೆಮರೀಸ್ ಕೂಡ ಸಂಗ್ರಹದ ಜತೆಗಿದ್ದವು.

ಅಚ್ಚುಕಟ್ಟಾದ ಬೈಂಡಿಂಗ್ ಗರಿಮುರಿಯ ಮೇಲೆ ಚಿನ್ನದ ಮೆರಗಿನ ಅಕ್ಷರಗಳು ಸಂಪನ್ನವಾದ ಆ ಪುಸ್ತಕಗಳ ದಿವ್ಯತೆಯನ್ನು ನೋಡಿ ಆನಂದಿಸುವುದರಲ್ಲಿ ಬಾಲಕ

ಖುರ್ಷೀದನಿಗೆ ಅದಮ್ಯವಾದ ಸುಖ ತುಂಬಿರುತ್ತಿತ್ತು. ಇದಕ್ಕಿಂತ ಹೆಚ್ಚಾಗಿ ಸಂಜೆಯಾದರೆ ಸಾಕು ಲೈಬ್ರರಿಯಲ್ಲಿ ತುಳುಕುತ್ತಿದ್ದ ಜನರು ನಡೆಸುವ ಚರ್ಚೆಯಂತೂ ಖುರ್ಷೀದನಿಗೆ ಪರಮಾನ್ನ ಸವಿದ ಸುಖ ತರುತ್ತಿತ್ತು.

ಬಾಂಬೆಯಿಂದಾಗಲಿ, ವಿದೇಶದಿಂದಾಗಲಿ ಸುದೀರ್ಘ ಅವಧಿಯ ನಂತರ ಯಾರಾದರೂ ಬಂದ ಸಂದರ್ಭ ಇದ್ದರಂತೂ ತೀರಿತು. ವಿವಿಧ ಕಾರ್ಯಕ್ರಮಗಳು ತುಂಬಿಕೊಂಡಿರುತ್ತಿದ್ದವು. ಸಾಂಸ್ಕೃತಿಕ ಸಂಪನ್ನತೆ ತುಂಬಿಕೊಂಡ ಕಾರ್ಯಕ್ರಮಗಳವು. ಖುರ್ಷೀದನ ಆಸ್ಥೆಗೆ ಎಲ್ಲಿಲ್ಲದ ಹಿಗ್ಗು ಆಗ. ಬಾಲಕನಾಗಿದ್ದರೂ ತುಂಬಾ ಪ್ರೀತಿಯಿಂದ ಮೌನವಾಗಿ ಅವನ್ನು ಆನಂದಿಸುತ್ತಿದ್ದ. ಹೊರಗಿನಿಂದ ಬಂದವರ, ಊರ ಹಿರಿಯರ ಮಾತುಗಳು, ವಿದೇಶಗಳ ಕುರಿತ ಚರ್ಚೆ, ಪ್ರಚಲಿತ ವಿದ್ಯಮಾನಗಳ ಕುರಿತು, ಬದುಕಿನ ರೀತಿ ನೀತಿಗಳ ಮೇಲಿನ ವಿಮರ್ಶೆ ಇತ್ಯಾದಿ ವಿಷಯಗಳು ಖುರ್ಷೀದನ ತಿಳಿವಿನ ಹರವನ್ನು ವಿಸ್ತರಿಸುತ್ತಿದ್ದವು. ಹಿರಿಯ ವಯಸ್ಸಾದ ವ್ಯಕ್ತಿಗಳು ಬದಲಾಗುತ್ತಿರುವ ಪ್ರಪಂಚದ ವೈಖರಿಯ ಕುರಿತು ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾ ಜೀವನದ ಅಂತಿಮ ಪ್ರಯಾಣಕ್ಕೆ ತಮ್ಮಲ್ಲಿ ಪ್ರತಿಯೊಬ್ಬನೂ ತಯಾರಾಗಿರಬೇಕು ಎಂದು ಸಿದ್ಧತೆಗೊಂಡಂತೆ ಮಾತನಾಡುವುದು ಸಾಮಾನ್ಯವಾಗಿತ್ತು. ತಮಾಷೆಯೆಂದರೆ ಈ ವೈರಾಗ್ಯದ ಮಾತುಗಳು ಹೊರಬರುತ್ತಿದ್ದುದು ಸಾಮಾನ್ಯವಾಗಿ ಸೊಗಸಾದ ಭೋಜನವೆಲ್ಲ ಮುಗಿದು ತೇಗಿ ಸುಖಪಡುವಾಗಲೇ. ಮುದುಕರ ವೈರಾಗ್ಯದ ಮಾತುಗಳಲ್ಲಿ ತಿಂದುಂಡು ತೇಗಿದ ಕಜ್ಜಾಯಕ್ಕೆ ಸುರಿದ ಬಿಸಿತುಪ್ಪದ ಪರಿಮಳವೂ ಆರಿರುತ್ತಿರಲಿಲ್ಲ. ನೀರುಕ್ಕಿಸುವ ಕೋಳಿ ಶೆಂಡಿಗೆಯ ರುಚಿ ಪೂರ್ತಿ ಬಾಯಿಂದ ಜಠರಕ್ಕೆ ಇಳಿದಿರುತ್ತಲೂ ಇರಲಿಲ್ಲ. ವೈರಾಗ್ಯದ ಮಾತುಗಳೆಲ್ಲ ಸೊಗಸಾದ ಭೋಜನದ ತುಂಡು ಅಗಳುಗಳು ಈ ಮುದುಕರ ಉಳಿದುಕೊಂಡ ಹಲ್ಲುಗಳ ಕುಳಿಯಿಂದ ಚಿಕ್ಕ ಕೊಚ್ಚುಗಳಿಂದ ಹೊರ ಬರುತ್ತಿದ್ದ ತುಂಬ ಆರಾಮಿನ ಕ್ಷಣಗಳಲ್ಲಿಯೇ ಉದ್ಭವಿಸುತ್ತಿದ್ದುದು ಖುರ್ಷೀದನಿಗೆ ಮೋಜೆನಿಸುತ್ತಿತ್ತು. ಆದರೂ ಬಾಳಿನ ಮುಸ್ಸಂಜೆಯಲ್ಲಿ ನಲುಗುತ್ತಿದ್ದ ವೃದ್ಧರ ಬಾಯಿಂದ ಹೊರಬರುವ ಇಂಥ ವೈರಾಗ್ಯದ ಮಾತುಗಳು ಎಳೆ ವಯಸ್ಸಿನ ಖುರ್ಷೀದನಂಥವನ ಸಂವೇದನೆಗೆ ಅಲೌಕಿಕವಾದ ಇನ್ನೇನೋ ಒಂದನ್ನು ಬಿಂಬಿಸುತ್ತಿದ್ದುದರಲ್ಲಿ ಸಂಶಯವಿರಲಿಲ್ಲ.

ವಿಮಾನ ಬಾಂಬೆಯ ನಿಲ್ದಾಣದಲ್ಲಿ ಇಳಿಯುತ್ತಿದ್ದಂತೆ ಹೊರ ಬಂದ ಖುರ್ಷೀದ ತನ್ನನ್ನು ಸ್ವಾಗತಿಸಲು ಬಂದಿದ್ದ ಭಾವ ನಜೀಬನನ್ನು ಗಮನಿಸಿದ. ಒಮ್ಮೆಗೇ ಹೃದಯದ ತಳದಲ್ಲೆಲ್ಲೋ ಪ್ರಾರಂಭವಾದಂತೆನಿಸಿದ ಖುಷಿಯ ರಿಂಗಣದಲ್ಲಿ ತೇಲಿ ಹೋದ. ಖುರ್ಷೀದನಿಗೆ ಬಾಲ್ಯದ ಒಡನಾಡಿಯಾದ ನಜೀಬನ ದರ್ಶನ ಸಂಭ್ರಮದಾಯಕವೆನಿಸಿತು. ಲಂಡನ್ನಿನಿಂದ ಹೊರಡುವಾಗ ಖುರ್ಷೀದ್ ಯೋಜಿಸಿದಂತೆ ಭಾರತಕ್ಕೆ ಬಂದು ಬಾಂಬೆಯಲ್ಲಿಯೇ ಬಹಳ ದಿನಗಳನ್ನು ಕಳೆಯಬೇಕು, ನಂತರ ಆಗ್ರಾ, ಡೆಲ್ಲಿ ಮತ್ತು

ಕಾಶ್ಮೀರಗಳಿಗೆ ಹೋಗಿ ಬರುವುದು ಎಂದಿತ್ತು. ಆದರೆ ವಿಮಾನ ನಿಲ್ದಾಣದಿಂದ ಕಾರಿನಲ್ಲಿ ಹೊರಬರುತ್ತಲೂ ಬಾಂಬೆ ನಗರಿಯ ಅಸಹ್ಯಕರ ಬೆಳವಣಿಗೆಗಳನ್ನು ಒಂದಾದರೊಂದಂತೆ ಕಾಣ ತೊಡಗಿದಾಗ ತಾನು ತನ್ನ ತಾರುಣ್ಯದ ಹದಿ ದಿನಗಳನ್ನು ಕಳೆದಿದ್ದ ಬಾಂಬೆಯನ್ನು ಈ ಅಸಹ್ಯಕರ ತೊಟ್ಟಿಯ ಸ್ವರೂಪದಲ್ಲಿ ಕಂಡಂತೆ ಇಡೀ ಬಾಂಬೆಯನ್ನು ತನ್ನಾಂತರ್ಯದ ಹರ್ಷ ಬತ್ತಿ ಹೋದ ಹತಾಶೆಯಲ್ಲಿ ದೂರಕ್ಕೆ ಎಸೆದು ಬಿಡಬೇಕು ಎಂದೆನಿಸಿತು.

'ನಾನು ಈ ನಗರದಲ್ಲಿ ಒಂದು ಕ್ಷಣವನ್ನೂ ಕಳೆಯಲಾರೆ..... ಮಿತ್ರಾ ನಾವು ನಮ್ಮ ಹಳ್ಳಿಗೇ ಹೋಗಿ ಬಿಡೋಣ' ಎಂದು ಪಕ್ಕದಲ್ಲಿ ಕುಳಿತಿದ್ದ ನಜೀಬನ ಕೈಹಿಡಿದು ಖುರ್ಷೀದ್ ಒಮ್ಮೆಗೇ ಚೀರಿದ.

ನಜೀಬನಿಗೆ ಖುರ್ಷೀದನ ವರ್ತನೆ ಆಶ್ಚರ್ಯ ತರುತ್ತಿದ್ದಂತೆ 'ಏನಿದು ನಿನ್ನ ಹುಚ್ಚಾಟ, ಹದಿನೈದು ವರ್ಷಗಳ ದೀರ್ಘಾವಧಿಯ ನಂತರವಷ್ಟೇ ತಾಯ್ನಾಡಿಗೆ ಬರುತ್ತಿರುವ ನಿನಗಾಗಿ ಬಂಧುಗಳ ದೊಡ್ಡ ದಂಡೇ ಇಲ್ಲಿ ಕಾದುಕೊಂಡಿರುವಾಗ ಒಂದೆರಡು ದಿನಗಳನ್ನಾದರೂ ನೀನಿಲ್ಲಿ ಕಳೆಯಬೇಕಲ್ಲವೆ' ಎಂದು ಮನವೊಲಿಸಲೆತ್ನಿಸಿದ.

ಪ್ರಯತ್ನ ಫಲಿಸಿತ್ತು. ಜನಗಳನ್ನು, ಮಿತ್ರರನ್ನು, ಬಂಧುಗಳನ್ನು ಕಾಣುತ್ತ ಹದಿನೈದು ದಿವಸಗಳೇ ಕಳೆದು ಹೋದವು. ಆದರೂ ಮುಗಿಯದ ಆಹ್ವಾನ. ಇನ್ನೂ ಅನೇಕರನ್ನು ಆತ ಕಾಣುವುದುಳಿದಿತ್ತು. ಬಂಧು ಮಿತ್ರರ ದೊಡ್ಡ ದಂಡೇ ತುಂಬಿಕೊಂಡಿದೆಯೆಂಬ ಅಂಶ ಅವನಲ್ಲಿ ಆಶ್ಚರ್ಯ ಹುಟ್ಟಿಸಿತು. ಬಹುತೇಕ ಈ ಜನರೆಲ್ಲರ ಆಹ್ವಾನದ ಮೂಲ ಮಮತೆಗಿಂತಲೂ ತಾವು ಕೂಡಿಟ್ಟ ಸಂಪತ್ತಿನ ವಿಕೃತ ವೈಭವವನ್ನು ತನ್ನೆದುರು ಪ್ರದರ್ಶಿಸುವುದಾಗಿದೆ ಎಂದು ಖುರ್ಷೀದನಿಗೆ ಅನಿಸದಿರಲಿಲ್ಲ - 'ಭಡವಾ, ನೀನು ಲಂಡನ್ನಿನಲ್ಲಿ ಇವನ್ನೆಲ್ಲ ಗಳಿಸಿರಬಹುದು, ಆದರೆ ನಾವೇನು ಇಲ್ಲಿ ಕೈಕಟ್ಟಿ ಕುಳಿತಿದ್ದೀವಿ ಎಂದುಕೊಳ್ಳಬೇಡ, ನಾವೂ ಇವನ್ನೆಲ್ಲ ಮಾಡಿದ್ದೀವಿ' ಎಂದು ಮೌನವಾಗಿಯೇ ವ್ಯಂಗ್ಯದ ದನಿಯ ಕರಗುವನ್ನು ಎದೆಗಿಟ್ಟು ಕೊರೆಯ ಹೊರಟಿದ್ದ ರೀತಿಯಿತ್ತು ಅವರ ನಡವಳಿಕೆಯಲ್ಲಿ.

ಆದುದರಿಂದ ಸಹಜವಾಗಿಯೇ ವಿಕೃತವಾದ ಈ ಪ್ರದರ್ಶನಗಳ ಆಡಂಬರದೊಂದಿಗೆ ಬಂಧುಗಳನ್ನು ಕಂಡು ಚಡಪಡಿಸುವುದಕ್ಕಿಂತ ತನ್ನ ಹಳ್ಳಿಗೆ ಹೋಗಿ ಬಿಡುವುದು ಸೂಕ್ತ ಎಂದು ಅನಿಸಿತು ಅವನಿಗೆ.

ಇಷ್ಟಾದರೂ ಖುರ್ಷೀದನ ಹೆಂಡತಿ ಮಕ್ಕಳಿಗೆ ಖುರ್ಷೀದನ ಬಯಕೆಯಂತೆ ನಡೆಯಲು ಇಷ್ಟವೆನಿಸಲಿಲ್ಲ. ಅವರಿಗೆ ಬಾಂಬೆಯಲ್ಲಿ ಹಲವಾರು ಹಿಂದಿ ಸಿನಿಮಾಗಳನ್ನು ನೋಡುವುದು ಇನ್ನೂ ಬಾಕಿ ಇತ್ತು. ಇಂತಿಂಥ ಟಾಕೀಸುಗಳು ಎಂದು ಲೆಕ್ಕ ಹಾಕಿಕೊಂಡು ಸಿನಿಮಾ ನೋಡುವ ಉತ್ಸಾಹದಲ್ಲಿ ಮುಳುಗಿದ್ದರು. ವಿಡಿಯೋಗಳಲ್ಲಿ ನೋಡಬಹುದಾಗಿದ್ದರೂ

ಸಿನಿಮಾ ಗೃಹಗಳಲ್ಲಿ ಕೆಲವನ್ನು ನೋಡುವುದೆಂಬ ಯೋಜನೆಯಿಂದ ದೂರವಾಗಲಿಲ್ಲ ಅವರು. ಪ್ರತಿ ವರ್ಷವೂ ಖುರ್ಷೀದನ ಪತ್ನಿ ಭಾರತಕ್ಕೆ ಬರುತ್ತಿದ್ದಳಾದರೂ ಅವಳ ಸಮಯವೆಲ್ಲ ಹಿಂದಿ ಸಿನಿಮಾ ನೋಡುವುದರಲ್ಲಿಯೇ ಕಳೆದು ಹೋಗುತ್ತಿತ್ತು. ಸಂಗಡ ಶಾಪಿಂಗಿಗೂ ಎಂದು ವೇಳೆ ಕಳೆಯುತ್ತಿತ್ತು. ಮಕ್ಕಳನ್ನು ಡೆಲ್ಲಿ, ಅಜ್ಮೇರ್, ಆಗ್ರಾ, ಜೈಪುರಕ್ಕೆ ಕರೆದೊಯ್ಯುತ್ತಿದ್ದಳಲ್ಲದೆ, ಒಂದ ಸಮಯ ಬೇಸಿಗೆಯಾಗಿದ್ದರೆ ಕಾಶ್ಮೀರಕ್ಕೆ ಮಕ್ಕಳನ್ನು ಕರೆದೊಯ್ಯುತ್ತಿದ್ದಳು. ಸ್ವಂತ ಊರಾದ ಹಳ್ಳಿಗೆ ಹೋಗಿ ಬರುವುದು ಮಾತ್ರ ಅವಳ ಕಾರ್ಯಕ್ರಮದ ಯಾದಿಯಲ್ಲಿ ಇರುತ್ತಲಿರಲಿಲ್ಲ.

ಅವಳಲ್ಲಿ ತುಂಬಿಕೊಂಡಿದ್ದ ಹಳ್ಳಿಯ ಚಿತ್ರವೆಂದರೆ ಪುಟ್ಟ ಲಂಗದ ಹುಡುಗಿ ಯಾಗಿದ್ದಾಗ ಅವಳು ನೋಡಿದ ಹಳ್ಳಿ ಮಾತ್ರ. ಉದ್ದುದ್ದ ಜೆಬಳೆಯಾದ ಪಲಕಾರಗಳಲ್ಲಿ ಹಾಗೂ ಹಳ್ಳಿಗಾಡಿನ ರತ್ನಾಭರಣಗಳಲ್ಲಿ ಅಲಂಕೃತಗೊಂಡ ಮಹಿಳೆಯರೇ ತುಂಬಿಕೊಂಡಿದ್ದು ಹಳ್ಳಿಯಲ್ಲಿ ಎಂದೇ ಅವಳ ಅನಿಸಿಕೆ. ಅಡಿಗೆಯ ಕೆಲಸದಲ್ಲಿ ಹಾಗೂ ಮಕ್ಕಳ ಹೇಸಿಗೆಯನ್ನು ತೊಳೆಯುವುದರಲ್ಲಿ ದಿನವೂ ಮುಳುಗಿದ ಆ ಹಳ್ಳಿಯ ಹೆಂಗಸರನ್ನು ಮಾತ್ರ ಹಳ್ಳಿಯ ಕುರಿತಾಗಿ ಅವಳು ನೆನಪಿಸಿಕೊಳ್ಳುತ್ತಿದ್ದುದಾಗಿತ್ತು.

ಕಡೆಗೆ ಖುರ್ಷೀದ ಮಿತ್ರನಾದ ನಜೀಬನನ್ನೇ ಹಳ್ಳಿಯೂರಿಗೆ ಜತೆಗಾರನಾಗಿ ಕರೆದೊಯ್ದ. ನಜೀಬ್ ಮಾತ್ರ ತನ್ನ ಊರಿನ ದಾರಿಯುದ್ದದ ಪ್ರಯಾಣಕ್ಕೆ ಒಳ್ಳೆಯ ಸಂಗಾತಿಯೆಂದು ಖುರ್ಷೀದನಿಗೆ ಹರ್ಷವಿತ್ತು.

ಊರಿಗೆ ಹೋಗಲಿರುವ ಟ್ರೇನಿಗಾಗಿ ನಜೀಬ್ ಜತೆ ಬಾಂಬೆ ಸೆಂಟ್ರಲ್ಲಿಗೆ ಹೋದಾಗ ಗಿಜಿಗಿಜಿಗುಡುವ ಅಲ್ಲಿನ ಜನ ಸಂದಣಿಯಿಂದಾಗಿ ಹತಾಶಗೊಂಡರೂ ಖುರ್ಷೀದ್ ಶಾಂತಚಿತ್ತ ನಾಗಿರಲು ತವಕಿಸಿದ. ಇನ್ನೇನು ಕೆಲವೇ ತಾಸುಗಳಲ್ಲಿ ತಾವು ಹಳ್ಳಿಯೂರಲ್ಲಿರುವೆವೆಂಬ ಸಂಭ್ರಮವೇ ಇತ್ತು ಆತನ ಮನಸ್ಸಿಗೆ. ಅರ್ಧ ತಾಸಿನ ಕಿರಿಕಿರಿಯೆನಿಸಿದ ವಿಳಂಬದೊಂದಿಗೆ ಅಂತೂ ಟ್ರೇನು ತೆವಳಲು ಪ್ರಾರಂಭಿಸಿತ್ತು ಪ್ಲಾಟ್‌ಫಾರ್ಮಿನಿಂದ. ಟ್ರೇನ್ ಕೂಡ ಫಾಸ್ಟ್ ಟ್ರೇನೇನಲ್ಲ. ಪ್ಯಾಸೆಂಜರ್ ಟ್ರೇನು. ನಿಧಾನ ಗತಿ.

ಟ್ರೇನಿನ ತನ್ನ ಬೋಗಿಯ ತುಂಬ ಗುಜರಾತಿ ಜನರೇ ತುಂಬಿ ಟ್ರೇನಿನ ಕರ್ಕಶ ಶಬ್ದಕ್ಕಿಂತಲೂ ಆ ಜನರ ಮಾತಿನ ಕಿಚಿಪಿಚಿಯೇ ಜೋರಾಗಿತ್ತು. ಟ್ರೇನ್ ಶಬ್ದಕ್ಕಿಂತಲೂ ಜೋರಾಗಿದೆ ಈ ಕಿಚಿಪಿಚಿ ಎಂದು ಮತ್ತೊಮ್ಮೆ ಅಂದುಕೊಂಡ. ತಾಸೊಂದು ಕಳೆದರೂ ಜನರ ಗದ್ದಲದ ಮಾತಿಗೆ ತಡೆಯೇ ಇದ್ದಿರಲಿಲ್ಲ. ಅದೇ ಪರಿದ ಧ್ವನಿಯ ಮಾತು, ಮಾತು, ಮಾತು. ಬಹುಶಃ ಈ ಜನರ ಮಾತಿನ ಕಿಚಿಪಿಚಿಗೆ ಇವರಿಗೆ ಗಿನೆಸ್ ದಾಖಲೆ ದೊರೆತರೂ ದೊರೆತೀತೆಂದು ನಜೀಬನೆಡೆ ತಿರುಗಿ ಖುರ್ಷೀದ್ ತಮಾಶೆಯಾಗಿ ಹೇಳಿದ. ನಜೀಬನಿಗೆ ಜೋರಾಗಿ ನಗು ಬಂತು ಈ ಮಾತಿಗೆ.

ಮುಂದಿನ ಸ್ಟೇಶನ್ನಿನಲ್ಲಿ ಎರಡು ಗುಜರಾತಿ ವ್ಯಾಪಾರಿಗಳು ಇವರಿದ್ದ ಬೋಗಿಯೊಳಗೆ ಹತ್ತಿದಾಗ ಸಹಜವಾಗಿಯೇ ಇವರ ಗಮನ ಅವರತ್ತ ಹರಿದಿತ್ತು. ಪ್ರಪಂಚದ ಇತರ ಯಾವ ವಿಚಾರಗಳೂ ಅವರನ್ನು ಬಾಧಿಸದೇ ದಿನ ನಿತ್ಯದ ದಿನಸಿಗಳ ಏರಿದ ಬೆಲೆ, ಊರಿನ ಮಳೆ ಬೆಳೆ ಲಾಭ ಲುಕ್ಸಾನು - ಹಣದ ಲೆಕ್ಕಾಚಾರ ಬಿಟ್ಟರೆ ಆ ವ್ಯಾಪಾರಿಗಳಿಗೆ ಬೇರೇನೂ ಬಾಧಿಸಲಿಲ್ಲ. ಇವರ ಮಾತಿನ ಸುಳಿಗೆ ಮೋಹಿತರಾಗಿ ಇನ್ನೂ ಕೆಲವರು ಇವರ ಮಾತಿನೊಂದಿಗೆ ತಮ್ಮ ಮಾತಿನ ಹಂಜಿ ನೇಯ ಬಿಟ್ಟರು. ಮಾತಿನ ಏಣಿ ಗಗನ ತಲುಪಿತ್ತು. ಜೋರಾದ ಏರುದನಿಯ ಮಾತು, ಮಾತು. ಖುರ್ಷೀದ್ ರೋಸಿ ಹೋಗಿದ್ದ. ಅವನ ಮನಸ್ಸು ಪಿಲಿಪಿಲಿ ಒದ್ದಾಡತೊಡಗಿತು ಒಂಸೆಯಿಂದ. ಟ್ರೇನ್ ಎಲ್ಲೇ ನಿಂತರೂ ಸಮಾಧಾನಕ್ಕಾಗಿ ಇವನೂ ಹೊರಗಿಳಿದು ತುಸು ಅಡ್ಡಾಡಿ ಮತ್ತೆ ಒಳ ಬರುತ್ತಿದ್ದ.

ಇಳಿಮಧ್ಯಾಹ್ನದ ಹೊತ್ತಿಗೆ ಟ್ರೇನು ಹಳ್ಳಿಯೂರನ್ನು ತಲುಪಿತ್ತು. ಹಳ್ಳಿಯನ್ನು ನೋಡುತ್ತಲೂ ಖುರ್ಷೀದನ ಹರ್ಷಕ್ಕೆ ಪಾರವೇ ಇರಲಿಲ್ಲ. ಪ್ರಯಾಣದ ದಣಿವೆಲ್ಲ ಮರೆತು ಹೋಗಿತ್ತು. ಹರ್ಷಾತಿರೇಕದಿಂದ ತನಗೇನು ತೊಂದರೆಯಾದೀತೇ ಎಂದುಕೊಳ್ಳುವಷ್ಟು ಹರ್ಷೋದ್ರಿಕ್ತನಾಗಿದ್ದ.

ಹಿಂದೆ ನೋಡಿದ್ದಕ್ಕಿಂತ ಹಳ್ಳಿ ಬದಲಾದಂತೇನು ತೋರಲಿಲ್ಲ ಅವನಿಗೆ. ಇಂಥ ಮನೆಗಳಾಗಲೀ, ಫಲವತ್ತಾದ ಭೂಮಿಯಾಗಲೀ ಬಾಂಬೆಯಿಂದ ಹಳ್ಳಿಯುದ್ದದ ದಾರಿಯಲ್ಲಿ ಇಲ್ಲವೇ ಇಲ್ಲ ಎಂದನಿಸಿತು. ಬಾಂಬೆಯಿಂದಲೇ ಈ ಮನೆಗಳನ್ನು ಎತ್ತಿ ತಂದು ಇಲ್ಲೀಗ ಹೂಡಿದರೇನೋ ಎಂಬಂತಿದ್ದವು ಹಳ್ಳಿಯ ಸೌಧಗಳು. ತಾನು ಮತ್ತು ನಜೀಬ್ ಮಾತ್ರ ಈ ಹಳ್ಳಿಯೂರಿನ ನಿಲ್ದಾಣದಲ್ಲಿ ಇಳಿದ ಪ್ರಯಾಣಿಕರು ಎಂದು ಅರಿವಿಗೆ ಬಂತು. ಮಿಕ್ಕುಳಿದ ಪ್ರಯಾಣಿಕರು ಇವರನ್ನೇ ದಿಟ್ಟಿಸಿದ್ದರು ಕೂಡ.

ನಿಲ್ದಾಣದ ಹೊರಗೆ ಸನಿಹಕ್ಕೊಂದು ಕುದುರೆ ಗಾಡಿ ನಿಂತಿತ್ತು. ಹಿಂದೆಲ್ಲ ಇಂಥ ಗಾಡಿಗಳ ದಂಡೇ ಪ್ರಯಾಣಿಕರಿಗಾಗಿ ಕಾದುಕೊಂಡಿರುತ್ತಿದ್ದುದು ನೆನಪಾಯ್ತು. ಕಾಲ ಬದಲಾಗಿದೆ. ಇದೊಂದೇ ಗಾಡಿಯೇ ಇಡೀ ಹಳ್ಳಿಯೂರಿಗೆ ಗತಿಯಾಗಿರಬೇಕು ಎಂದುಕೊಂಡ.

ಕುದುರೆಗಾಡಿಯಿಂದ ವೃದ್ಧನೊಬ್ಬ ಕತ್ತು ಚಾಚಿ ಇವರತ್ತ ನೋಡಿ ಹಣ ಗಳಿಸುವುದಕ್ಕೇ ಈ ವ್ಯಕ್ತಿಗಳು ತನಗೆ ದೊರೆತರು ಎಂದು ಯೋಚಿಸುವಂತಿತ್ತು.

`ತುಂಬಾ ಕಾಸು ತಂದಿರಬೇಕು` ವೃದ್ಧ ಪಿಸುಗುಟ್ಟಿದ.

`ಅಂದರೆ ಏನು ನೀನು ಹೇಳುತ್ತಿರುವುದು` ಆಶ್ಚರ್ಯದೊಂದಿಗೆ ತುಸು ಜೋರಾಗಿಯೇ ನಜೀಬ ಮಾರ್ನುಡಿದ ವೃದ್ಧನಿಗೆ.

'ನೀವು ಪಟ್ಟಣಕ್ಕೆ ಹೋಗಿ ಸುದೈವದ ಗಂಟನ್ನು ಬಾಚಿಕೊಂಡಿದ್ದೀರಿ' ನಿಖರವಾದ ದನಿಯಲ್ಲಿ ಹೇಳಿದ ವೃದ್ಧ ತನ್ನ ಪಟ್ಟು ಬಿಡಲಿಲ್ಲ.

'ಏನಾಯಿತು ಇದರಿಂದ, ನಿನಗಾದ ತೊಂದರೆಯೇನು' ನಜೀಬನೂ ವಾದ ಬೆಳೆಸಿದ.

'ಪ್ರಸನ್ನತೆ ಮತ್ತು ತುಂಬಿಕೊಂಡ ಮೈಕೈ ಆರೋಗ್ಯ ಗಮನಿಸಿದರೆ ನೀವು ತುಂಬಾ ಹಣ ಗಳಿಸಿರಲೇಬೇಕು' ವೃದ್ಧನ ಪ್ರತಿವಾದ ಜೋರಾಗಿಯೇ ಇತ್ತು.

ನಜೀಬ್ ಮತ್ತು ಖುರ್ಷೀದರಿಬ್ಬರೂ ಪರಸ್ಪರ ಮುಖ ನೋಡಿಕೊಂಡರು. ಮುದುಕ ತುಂಬಾ ಘಾಟಿ ಇದ್ದಂತಿದ್ದ. 'ದಯಮಾಡಿ ನಮ್ಮನ್ನು ಖ್ವಾಜಿ ಮೊಹಲ್ಲಾದೆಡೆಗೆ ಒಯ್ಯುವಿಯೊ' ನಜೀಬ್ ಮುದುಕನನ್ನು ಕೇಳಿದ.

'ಖ್ವಾಜಿ ಮೊಹಲ್ಲಾಕ್ಕೆ?' ಮುದುಕ ಅನುಮಾನಿಸಿದಂತಿತ್ತು. ಕಣ್ಣರಳಿಸಿದರೂ ತುಸು ಹೊತ್ತಿಗೆ ಮತ್ತೆ ಬಾಡಿದವು ಅವನ ಕಣ್ಗೊಂಬೆಗಳು. 'ಖ್ವಾಜಿ ಮೊಹಲ್ಲಾ?' ಮತ್ತೆ ಮರು ಪ್ರಶ್ನೆ ಅವನಿಂದ. ಆಶ್ಚರ್ಯವೂ ಇತ್ತು. 'ಯಾರಾದರೂ ಆ ಮೊಹಲ್ಲಾಕ್ಕೆ ಹೋಗ ಬಯಸುವರೇನು?' ಹಾಗೆ ಹೇಳಿದಂತಿತ್ತು ಅವನ ಭಾಷೆ. ಮೌನವಾಗಿಯೇ ಗಾಡಿಯೇರಿ ಮುಂದಣ ಜಾಗೆಗೆ ಬಂದು ಕುದುರೆಯ ಮೂಗುದಾಣ ಕೈಗೆತ್ತಿಕೊಂಡ.

ಮತ್ತೆ ತಮ್ಮನ್ನೇ ಪರಸ್ಪರ ನೋಡಿಕೊಂಡ ಖುರ್ಷೀದ್ ಮತ್ತು ನಜೀಬರಿಬ್ಬರು ಸೂಟ್‌ಕೇಸ್‌ಗಳನ್ನು ಗಾಡಿಯಲ್ಲಿರಿಸುತ್ತ ಹಿಂದಿನ ಜಾಗೆಗೇರಿ ಕುಳಿತುಕೊಂಡರು. ವಿಚಾರಗಳ ಹೊರೆಯಿಂದ ಭಾರಗೊಂಡಂತೆ ನಿಧಾನವಾಗಿ ಮುಂದೆ ಚಲಿಸಲಾರಂಭಿಸಿತು. ನಿಧಾನವಾಗಿಯೇ ಜೋರಾಗಿ ಓಡುತ್ತೋಡುತ್ತ ಇಡೀ ಗಾಡಿಯೇ ನಾಗಾಲೋಟದ ಹೊಯ್ದಾಟದಲ್ಲಿ ತುಂಬಿಕೊಂಡಿತು. ವಾತಾವರಣ ಶಾಂತವಾಗಿತ್ತು. ನದಿ ತೀರದ ಗಾಳಿ ಬೆಳೆದ ಹುಲ್ಲಿನ ಗರಿಕೆಯ ನಡುವೆ ತೊನೆದು ಹೊಯ್ದಾಡಿ ಬೆಳೆದ ಗಿಡಮರಗಳನ್ನೆಲ್ಲ ತೂರಾಡಿಸಿ ನಜೀಬ್ ಮತ್ತು ಖುರ್ಷೀದರ ಮುಂಗೂದಲನ್ನು ಕೆದರುತ್ತಲಿದ್ದುದರಿಂದ ಸತತವಾಗಿ ಅವರಿಬ್ಬರೂ ತಮ್ಮ ಕೈಯಿಂದ ತಲೆಗೂದಲನ್ನು ಸರಿಪಡಿಸಿಕೊಳ್ಳುತ್ತಲೇ ಇದ್ದರು.

'ಅಕಾ ಅಲ್ಲಿ..... ಅಲ್ಲಿ...... ರಫೀಕ್ ಕಾಕಾನ ಮನೆ' ನಜೀಬ್ ಎರಡಂತಸ್ತಿನ ಮನೆಯೊಂದನ್ನು ತೋರಿಸುತ್ತ ನುಡಿದ.

ಕುದುರೆ ಗಾಡಿ ಮನೆಯೆದುರಿಂದ ಹಾದು ಹೋಗುತ್ತಿದ್ದಂತೆ ಮನೆಯ ಬಾಗಿಲಿಗೆ ತೊಡಿಸಿದ ಬೀಗ ತೂಗಾಡುತ್ತಿದ್ದುದನ್ನವರು ಗಮನಿಸಿದರು. ಆ ಮನೆಗೆ ಹಚ್ಚಿದ ಬಣ್ಣದ ಪೇಂಟು ತುಸು ಮಸುಕುಗೊಂಡಿತ್ತು. ಅವರು ಅಲ್ಲಿನ ಅನೇಕ ಮನೆ ಮಠಗಳ ಮೇಲಿಂದ ಹಾದು ಹೋಗುತ್ತಿದ್ದಾಗ ಬಹಳಷ್ಟು ಬೀಗ ತೊಡಿಸಿಕೊಂಡಿದ್ದವೇ ಕಂಡವು. ಭಾರತದಲ್ಲೇ

ಇರುವ ನಜೀಬನಿಗೂ ಸಹ ಆ ಮನೆಗಳ ಮಾಲೀಕರು ಯಾರೆಂಬುದು ತಿಳಿದಂತಿರಲಿಲ್ಲ. ಪ್ರಾಯಶಃ ಆತ ಬಾಂಬೆಗೆ ಹೋಗುಳಿದ ನಂತರವಷ್ಟೇ ಆ ಮನೆಗಳನ್ನು ಕಟ್ಟಿರಲು ಸಾಕು. ಹಿಂದೆ ಖುರ್ಷೀದ ಊರಿನ ಕಾಲ್ದಾರಿಗಳ ಕುರಿತು ಖುಷಿಗೊಂಡಿದ್ದನೆಂಬುದು ನಜೀಬನಿಗೆ ತಿಳಿಯಿತು. ಆಗ ಇಕ್ಕೆಲವಲ್ಲಿ ಬೆಳೆದುಕೊಂಡ ಸೊಗಸಾದ ನೆರಳಿನ ಮರಗಳು ಇದ್ದವು. ಅಂದವಾಗಿ ಬೆಳೆದುಕೊಂಡಿದ್ದ ಆಲದ ಮರಗಳು ಮಕ್ಕಳಿಗೆ ಜೀಕುತ್ತ ಜೀಕುತ್ತ ಸಂತಸಿಸಲು ಅವಕಾಶ ಮಾಡಿದ್ದವು..... ಉದ್ದುದ್ದ ಚಾಚಿದ ತಮ್ಮ ಕೊಂಬೆಗಳ ರಾಶಿಯಿಂದ ನದಿಯತ್ತ ಮುಖ ಮಾಡಿ ಬೆಳೆದಿರುತ್ತಿದ್ದ ಅವುಗಳ ಸಂಪನ್ನತೆ ಉಪಮಾತೀತವಾಗಿತ್ತು. ಬೇಸಿಗೆಯಲ್ಲಿ ಹಿರಿಯರೂ ಸಹ ಈ ಮರಗಳ ತೋಪಿನತ್ತ ಬಂದು ಸಂತಸಿಸುವವರೆ. ಗಹನವಾದ ಚರ್ಚೆಯಲ್ಲಿ ಮುಳುಗಿ ಈ ಮರಗಳ ನೆರಳನ್ನು ತೃಪ್ತಿಯಿಂದ ಭೋಗಿಸುತ್ತಿದ್ದರು. ಮಳೆಗಾಲಕ್ಕೆ ಆ ಜಾಗೆಯಲ್ಲಿ ಮನೆ ಮಂದಿಗಳ ಪಿಕ್‌ನಿಕ್ ಇರುತ್ತಿತ್ತು. ಸೊಗಸಾದ ಖಾದ್ಯಗಳ ರಾಶಿಯೇ ಮನೆ ಮನೆಯಿಂದ ಬರುತ್ತಿದ್ದವು. ಖುರ್ಷೀದ್ ಕುಳಿತಿದ್ದ ಗಾಡಿಯಿಂದ ಈಗ ಆ ಸ್ಥಳದೆಡೆ ದೀರ್ಘವಾಗಿ ನೋಡಿದನಾದರೂ ಹೊಯ್ದಾಡುತ್ತಿದ್ದ ಗಾಳಿಯ ಹೊರತಾಗಿ ಮತ್ತೆ ಯಾರೂ ಅಲ್ಲಿದ್ದುದು ಕಾಣಲಿಲ್ಲ.

"ಅಲ್ಲಿ ನೋಡು..... ಶೌಕತ್ ಅಣ್ಣನ ಮನೆ ಅಲ್ಲಿ.... ಆ ಕಡೆ"

"ಅಂದರೆ.... ಈಗ ಆಫ್ರಿಕಾಕ್ಕೆ ಹೋಗಿ ಉಳಿದುಕೊಂಡಿದ್ದಾನಲ್ಲ....? ಅವನೇ ತಾನೇ?"

"ಅಲ್ಲ ಆತನಲ್ಲ..... ಈತ ಬಾಂಬೆಗೆ ಹೋಗಿ ಉಳಿದಿದ್ದಾನೆ... ಅವನು... ಇದೀಗ ವಲಕೇಶ್ವರದಲ್ಲಿ ಒಂದು ಅಂದದ ಫ್ಲ್ಯಾಟ್ ಕೂಡ ಖರೀದಿಸಿದ್ದಾನೆ"

ಹೀಗೇ ಸಾಗಿತ್ತು ಅವರ ಮಾತು ಕುದುರೆ ಗಾಡಿಯೊಳಗೆ.

ಇದು ಇವರ ಮನೆ, ಅದು ಅವರ ಮನೆ, ಆತ ಹಾಲು ಮಾರುತ್ತಿದ್ದ, ಈತ ಸಿಹಿ ಖಾದ್ಯದ ಅಂಗಡಿ ತೆರೆದಿದ್ದ. ಆತ ಲಂಡನ್ನಿನಲ್ಲಿರುವ ಮಗನನ್ನು ಬಿಟ್ಟು ಈಗ ಸತ್ತುಹೋದ. ತುಂಬಾ ದಿನಗಳಿಂದಲೂ ಈ ಮನೆ ಮುಚ್ಚಿಕೊಂಡೇ ಇದೆ. ಆ ಕೆಂಬಣ್ಣದ ತಾರಸಿಯ ಮನೆ ಸೈರಾ ಚಿಕ್ಕಿಯದು. ಅವಳ ಗಂಡ ತಾನಿದ್ದ ಆಫ್ರಿಕಾದಿಂದ ಎಂಟು ತೊಲೆಗಳಷ್ಟು ಅಪ್ಪಟ ಬಂಗಾರ ತಂದಿದ್ದ. ಅವನ ತಮ್ಮ ತಂದಿದ್ದ ಈ ಬಂಗಾರವನ್ನು ನಯವಾಗಿ ಎಗರಿಸಿ ಪಾಕಿಸ್ತಾನಕ್ಕೆ ಓಡಿಹೋದ. ಇದೀಗ ಸೈರಾ ಚಿಕ್ಕಿ ಒಬ್ಬಂಟಿಯಾಗಿ ಕಾಲ ನೂಕುತ್ತಿದ್ದಾಳೆ. ಆದರೆ ಅವಳ ಗಂಡ ಅವಳ ಪಾಲಿಗೆ ಸಾಕಷ್ಟು ಸಂಪತ್ತು ಶೇಖರಿಸಿ ಅವಳ ಜೀವಿತಕ್ಕೆ ತೊಂದರೆಯಾಗದಂತೆ ಮಾಡಿಯೇ ಸತ್ತಿದ್ದಾನೆ.

ಹೀಗೆ ಎಷ್ಟೋ ಸುದ್ದಿಗಳು, ಕತೆಗಳು, ಕ್ಲೇಶಗಳು, ಸುಖ ದುಃಖಗಳ ಸಂಗತಿಗಳನ್ನು ಗಾಡಿಯಲ್ಲಿ ಹಳ್ಳಿಯೂರಿನ ದಾರಿಯಲ್ಲಿ ನೆನಪಿಸಿಕೊಂಡರು, ವಿನಿಮಯಿಸಿಕೊಂಡರು ಅವರು. ಕುದುರೆ ಗಾಡಿಯ ಜೀರಲು ಸದ್ದು ಕೇಳಿ ಹೆಂಗಸೊಬ್ಬಳು ಅವಳ ಮನೆಯ ಮೊದಲಂತಸ್ತಿನ ಕಿಟಕಿಯಿಂದ ಹೊರಗೆ ನೋಡ ಹತ್ತಿದಳು. ಖುರ್ಷೀದ್ ಕೂಡ ಅವಳತ್ತ ನೋಡಿದ. ಆ ಹೆಂಗಸಿನ ಮುಖ ಜೀವನ ಪೂರ್ತದ ಏರಿಳಿತಗಳ ಕಾವಿಗೆ ಒಣಗಿ ನಿರ್ಭಾವುಕವಾಗಿದ್ದಂತೆ ಕಂಡಿತು.

'ಇದು.... ಪೇಶ್ ಇಮಾಮ್ ಸಾಹೇಬರ ಮನೆ ತಾನೆ?' ದಾರಿಯೊಂದರ ಮನೆ ತನ್ನ ಗುರುತಿಗೆ ಹತ್ತಿತೆಂಬಂತೆ ಖುರ್ಷೀದ್ ನಜೀಬನ ಬಳಿ ವಿಚಾರಿಸಿದ.

'ನೀನು ಅವರ ಮಗಳು ಶಕೀಲಾಳನ್ನು ನೆನಪಿಸಿಕೊಳ್ಳಬಲ್ಲೆಯೇನು?' ನಜೀಬ್ ಕೇಳಿದ.

'ಅದೇ ಸಂತ ಕ್ಸೇವಿಯರ್‌ಸಲ್ಲಿ ಕಲಿಯುತ್ತಿದ್ದ ಹುಡುಗಿ ತಾನೆ?'

'ಸರಿಯಾಗಿಯೇ ಅಂದೆ ನೋಡು' ನಜೀಬ್ ನುಡಿದ. 'ನಿನಗೆ ಗೊತ್ತು, ಅವಳಿಗೆ ನಾಟಕದಲ್ಲಿ ನಟಿಸುವುದೆಂದರೆ ತುಂಬಾ ಇಷ್ಟವಾಗಿತ್ತು'

'ಅದೇ ನಾವೆಲ್ಲ ಅವಳಲ್ಲಿ ಅನುರಕ್ತಗೊಂಡು ಹಾತೊರೆದರೂ ಅದಕ್ಕವಳು ಉತ್ತೇಜನ ನೀಡದೇ ಹೋದಳಲ್ಲ'

'ಅದೇ ನೀನು ತಿಳಿದಂತಿಲ್ಲ, ಫಿಲ್ಮ್ ಪ್ರೊಡ್ಯೂಸರ್ ಒಬ್ಬ ಸಿನಿಮಾದಲ್ಲಿ ಒಂದು ರೋಲ್ ನೀಡಲು ಮುಂದಾಗಿದ್ದ ಕೂಡ'

'ಇಲ್ಲ ಅವಳು ಸಿನಿಮಾದಲ್ಲಿ ನಟಿಸಲಿಲ್ಲ ಕೊನೆಗೆ ಅಲ್ಲವೆ? ಒಳ್ಳೆಯದೇ ಆಯ್ತು. ಈಗ ಎಲ್ಲಿದ್ದಾಳೆ ಗೊತ್ತೇನು?' ಖುರ್ಷೀದ್ ತುಂಬಾ ಆಸ್ಥೆಯಿಂದ ವಿಚಾರಿಸಿದ.

'ಅವಳೀಗ ತುಲಾರಾಮ್ ಎಂಬ ಮಾರವಾಡಿ ಜೊತೆ ವಾಸಿಸಹತ್ತಿದ್ದಾಳೆ'

'ಅವಳೇನು ಅವನನ್ನು ಮದುವೆಯಾಗಿದ್ದಾಳೋ?'

'ಆ ವಿಷಯ ತಿಳಿಯದು'

ತಕ್ಷಣ ಪೇಶ್ ಇಮಾಮ್ ಸಾಹೇಬರ ಮುಖ ಚಹರೆ ಖುರ್ಷೀದನ ಮನದಲ್ಲಿ ಸುಳಿದಾಡಿತು. ಅವರ ಮುಖದಲ್ಲಿದ್ದ ವಿಲಕ್ಷಣ ಕಾಂತಿ ಅವನ ನೆನಪಿಗೆ ಬಂತಲ್ಲದೆ, ಧರ್ಮದ ಕುರಿತಾಗಿನ ಅವರ ನಿಖರವಾದ ತಿಳುವಳಿಕೆ ಕೂಡ ನೆನೆಸಿಕೊಂಡ. ತುಂಬಾ ಶಿಸ್ತಿನ ಮನುಷ್ಯನೆಂಬುದರಲ್ಲಿ ಸಂಶಯವೇ ಇರಲಿಲ್ಲ.

ಇದೀಗ ಗಾಡಿ ಹಳ್ಳಿಯೂರಿನ ಕಿರು ರಸ್ತೆಗಳ ಮೇಲಿಂದ ಓಡತೊಡಗಿತ್ತು. ಅವೆಲ್ಲ ಖಾಲಿಯಾಗಿ ಭಣಭಣಗುಡುತ್ತಿದ್ದವು. ಎಲ್ಲೋ ಅಲ್ಲಿ ಇಲ್ಲಿ ಒಂದೆರಡು ಜನ ತೋರುತ್ತಿದ್ದರು. ಚಿಕ್ಕ ಮಕ್ಕಳಂತೂ ಎಲ್ಲಿಯೂ ಕಾಣಿಸುತ್ತಿರಲಿಲ್ಲ. ತುಂಬಾ ಅಂತರದಲ್ಲಿ ಒಂದೊಂದು ಚಿಕ್ಕ ಅಂಗಡಿಗಳು ಕಂಡು ಬರುತ್ತಿದ್ದವು. ಎಂಟ್ಹತ್ತು ಮನೆಗಳಲ್ಲಿ ಒಂದು ಮನೆಯಲ್ಲಿ ಜನರಿದ್ದುದು ಕಾಣುತ್ತಿತ್ತು.

'ಮಿತ್ರಾ ಈ ಎಲ್ಲ ಮೊಹಲ್ಲಾಗಳು ಹೀಗೆ ಭಣಗುಡುತ್ತಿವೆಯೇನು....? ನನಗಂತೂ ಈ ನಿರ್ವಾತ ಮತ್ತು ಮೌನ ಯಾತನೆಯನ್ನೇ ಎರಚುತ್ತಿದೆ' ಖುರ್ಷೀದ್ ಕಂಪಿಸುವ ದನಿಯಲ್ಲಿ ನುಡಿದ.

'ದನಕರುಗಳ ಗೋಮಾಳ ಇಲ್ಲಿ ಇನ್ನೂ ಇದೆಯಲ್ಲ' ಪ್ರಥಮತಃ ಕುದುರೆಗಾಡಿಯ ಮುದುಕ ಹೀಗೆ ಹೇಳುತ್ತ ಇವರ ನಡುವೆ ಮೂಗು ತೂರಿಸಿದ್ದ.

'ಎಷ್ಟು ದನಕರುಗಳಿವೆಯಪ್ಪ ಅಲ್ಲಿ'

'ಇಪ್ಪತ್ತು ಇಪ್ಪತ್ತೈದಾದರೂ ಇರಬೇಕು ಕಡಿಮೆಯೆಂದರೆ. ಚೆನ್ನಾಗಿ ಹುಲ್ಲು ಬೆಳೆಯುತ್ತದೆ, ಗೋವಳಿಗರು ಬಂದು ಇದೀಗ ಇಲ್ಲೇ ಠಿಕಾಣಿ ಹೂಡಿದ್ದಾರೆ'

'ಹುಲ್ಲನ್ನವರು ಎಲ್ಲಿಗೆ ಮಾರುತ್ತಾರೆ?'

'ಪ್ರತಿ ಮುಂಜಾನೆಯೂ ಹಾಲು-ಹುಲ್ಲು ರೈಲಲ್ಲಿ ಹೇರಿ ಕಳಿಸುತ್ತಾರೆ. ಸೂರತ್ ಮತ್ತು ಬಾಂಬೆ ವ್ಯಾಪಾರಿಗಳು ಅದನ್ನು ಅಲ್ಲಿ ಇಳಿಸಿಕೊಳ್ಳುತ್ತಾರೆ. ವ್ಯಾಪಾರಿಗಳ ಕಡೆ ಮನುಷ್ಯ ಅವನ್ನೆಲ್ಲ ಪರಿಶೀಲಿಸಿ ಸ್ಥಳದಲ್ಲಿಯೇ ರೋಖವಾಗಿ ಹಣ ಪಾವತಿ ಮಾಡುತ್ತಿರುತ್ತಾನೆ'

'ಇದು ನಿಜವೆ?'

ಗಾಡಿ ಇದೀಗ ತುಂಬಾ ಪರಿಚಯದ ಆಪ್ತವಾದ ಮೊಹಲ್ಲಾವನ್ನು ಪ್ರವೇಶಿಸಿತು. ಇಲ್ಲಿಯೇ ಖುರ್ಷೀದ್ ಮತ್ತು ನಜೀಬ್ ತಮ್ಮ ಬದುಕಿನ ಮಹತ್ತರ ದಿನಗಳನ್ನು ಕಳೆದಿದ್ದರು. ಸುಂದರ ವಿನ್ಯಾಸದ ಭವ್ಯವಾದ ಮನೆಗಳು ಇಕ್ಕೆಲದಲ್ಲೂ ಕಟ್ಟಿಕೊಂಡಿದ್ದವು. ತಮ್ಮಲ್ಲಿ ಉಳಿಯಲು ಬರುವ ಮನೆ ಮಂದಿಗಾಗಿ ಕತ್ತು ಚಾಚಿ ಕಾದುಕೊಂಡಂತಿದ್ದವು ಆ ಮನೆಗಳು. ಮನೆ ಮಂದಿಗಳೆಲ್ಲ ಬಂದರೆ ಮತ್ತೆ ಮೊಹಲ್ಲಾದ ಜೀವಕಳೆ ಚಿಗುರಿ ಕೊಳ್ಳುವುದರಲ್ಲಿ ಸಂಶಯವೇ ಇಲ್ಲ.

ಖುರ್ಷೀದನ ಮನೆಯೆದುರಿಗೆ ಗಾಡಿ ಬಂದು ನಿಂತಿತು. ಗಾಡಿ ನಿಂತಂತೆಯೇ ಗೆಳೆಯರಿಬ್ಬರೂ ಕೆಳಗಿಳಿಯುತ್ತಿದ್ದಂತೆ ಎದುರು ಮನೆಯ ಮುದುಕಿಯ ಮೋರೆ ಹೊರ ಬಂದು ಕಿಟಕಿಯ ಚೌಕಟ್ಟಿನಲ್ಲಿ ಹೊರಗೆ ಇಣುಕಿತ್ತು. ಒಮ್ಮೆಗೇ ಅಲ್ಲಿನ ಪ್ರತಿ ಮನೆಯ

ಕಿಟಕಿಯಿಂದಲೂ ಅರೆ ತೆರೆದ ಬಾಗಿಲಿನಿಂದ ಮುಖಗಳು ಹೊರ ಇಣುಕಿದವು. ನೆನಪಿನಾಳದಿಂದ ಖುರ್ಷೀದ ಒಂದೊಂದೇ ಮುಖಗಳನ್ನು ಗುರುತಿಸಲೂ ಪ್ರಾರಂಭಿಸಿದ. ಒಂದು ರಾತ್ರಿಯನ್ನಿಲ್ಲಿ ತಾನು ಕಳೆಯಬಹುದು ಎಂದು ಖುರ್ಷೀದ್ ಯೋಚಿಸಿದಂತಿತ್ತು.

'ಯಾರ ಬಳಿ ಮನೆಯ ಚಾವಿ ಇದೆಯೊ, ಸೋಜಿಗವೆಂದರೆ ಆ ವಿಷಯವೇ ನನಗೆ ತಿಳಿಯದು' ನಜೀಬ್ ಹೇಳಿದ. ಮುಂಬೈಯಿಂದ ಹೊರಡುವಾಗ ಅದನ್ನು ಕೇಳಿ ತಿಳಿಯಲು ಮರೆತು ಬಿಟ್ಟಿದ್ದ.

ಹೊಯ್ಸಾಟದಲ್ಲಿದ್ದ ಗೆಳೆಯರ ಬಳಿ ಥಟ್ಟನೆ ಸುಕ್ಕಾದ ಮುದಿ ಕೈಯ್ಯೊಂದು ಸಮೀಪಿಸಿತು. ಕಿಟಕಿಯಿಂದ ಹೊರ ಬಂದ ಕೈ ಅದು. ಖುರ್ಷೀದ್ ಮೇಲೇರಿ ಕಿಟಕಿ ಬಳಿ ಬಂದು ನಿಂತ. ಆ ವೃದ್ಧೆ ಇನ್ನೂ ಕಿಟಕಿಯ ಚೌಕಟ್ಟಿನಲ್ಲಿ ಸ್ಥಾಯಿಯಾಗಿದ್ದಳು. ಅವಳ ತಲೆಯೆಲ್ಲ ಹಿಮದಂತೆ ಬಿಳುಪಾಗಿದ್ದವು.

ನಡುಗುತ್ತಿದ್ದ ಕೃಶ ಧ್ವನಿಯಲ್ಲಿ 'ನೀನು ಗೀಯಾಸುದ್ದೀನನ ಮಗನಲ್ಲವೆ' ಎಂದದ್ದು ಖುರ್ಷೀದನ ಕಿವಿಗೆ ಕೇಳಿಸಿತು.

ಈತ 'ಹೌದು' ಎಂದ. ಥಟ್ಟನೆ ತುಂಬಾ ಪರಿಚಯದ ಹಿತಕರವಾದ ಮುಖ ಅವನ ಮನದಲ್ಲಿ ಮೂಡಿಕೊಂಡಿತು. 'ಅರರೇ ನೀನು ಶಹೀದಾ ಅತ್ತೆಯಲ್ಲವೆ, ಶಹೀದಾ ಖಾಲಾ' ಒಮ್ಮೆಗೇ ಖುರ್ಷೀದ್ ಹರ್ಷದಿಂದ ಕುಪ್ಪಳಿಸಿದ.

'ನೀನು ನನ್ನನ್ನು ಗುರುತಿಸಿದಿ ನಿಜಕ್ಕೂ' ಆನಂದಗೊಂಡು ಆ ಹೆಂಗಸು ಮಾರ್ನುಡಿದಳು : 'ತಡಿ ನಾನು ಚಾವಿಯನ್ನು ಕಳಿಸಿಕೊಡುವೆ'

ಹೆಚ್ಚು ಹೆಚ್ಚು ವಯಸ್ಸಾದ ಮುಖಗಳು ಇತರ ಕಿಟಕಿಗಳಿಂದ ಇಣುಕಲಾರಂಭಿಸಿದವು. ತಮ್ಮ ಗುರುತು ಹಿಡಿಯಲು ಸಹಾಯಕವಾದ ಮಾತುಗಳನ್ನು ಅವರು ಇವನಲ್ಲಿ ಆಡಲಾರಂಭಿಸಿದರು.

'ಓಹ್ ಇವರು ಫಿದಾ ಆಲಿ, ಬಾಂಬೆಯಲ್ಲಿ ಬೀಗದಂಗಡಿ ಇಟ್ಟುಕೊಂಡಿದ್ದಾರೆ'

'ಇವರು ಜನಾಬ್ ಇಬ್ರಾಹಿಂ, ಖುರ್ಷೀದನಿಗೆ ಪ್ರಾಥಮಿಕ ಶಾಲೆಯಲ್ಲಿ ಕಲಿಸಿದ ಮಾಸ್ತರು'

'ರಹಮತ್ ಆಪಾ ಇವರು, ಇವರ ಮನೆಯಿಂದಲೇ ಮದುವೆ ದಿಬ್ಬಣ ಪರಾರಿಯಾಗಿತ್ತು. ಮದುವೆ ಗಂಡು ಹುಡುಗಿಗಿಂತ ತುಂಬಾ ವಯಸ್ಸಾದವನು ಎಂಬುದು ಅದಕ್ಕೆ ಕಾರಣವಾಗಿತ್ತಲ್ಲವೆ?'

'ಮೌಲ್ವಿ ಬಶೀರುದ್ದೀನ್ - ಪುಸ್ತಕದಂಗಡಿ ಇಟ್ಟುಕೊಂಡಿದ್ದರು. ಇವರ ಅಂಗಡಿಗೆ ಪಪ್ಪ ದಿನವೂ ಸಂಜೆಹೊತ್ತು ಬರುತ್ತಿದ್ದುದು ವಾಡಿಕೆಯಾಗಿತ್ತು'

ಕಳೆದು ಹೋದ ದಿನಗಳು ಪ್ರತಿ ವ್ಯಕ್ತಿಯ ಮೋರೆಯ ಮೇಲೂ ತನ್ನ ಬಿಂಜಲನ್ನು ಹೆಣೆದಿತ್ತು. ಕೇರಿ ತುಂಬಾ ಪರಿಚಯದ ಮರಗಳ್ಳಿ ತೆರೆದುಕೊಳ್ಳತೊಡಗಿದೆ ಎಂದನಿಸಿತು ಈಗ. ಕಾಲ ಮೊಹಲ್ಲಾದ ಮೇಲೆ ತನ್ನ ನಗ್ನ ಆಕ್ರಮಣ ನಡೆಸಿತ್ತಾದರೂ ಇದು ತನ್ನ ಮೊಹಲ್ಲಾವೇ ಇನ್ನೂ ಕೂಡಾ ಎಂದಂದುಕೊಂಡ.

ಶಹೀದಾ ಅತ್ತೆ ಕಿಟಕಿಯಿಂದ ಇವನತ್ತ ಚಾವಿಯನ್ನು ಎಸೆದಳು.

'ನೀನು ಬರಲಿರುವ ಸುದ್ದಿ ತಿಳಿಸಿದ ಪತ್ರ ಭಾಬಿಯಿಂದ ಬಂದಿತ್ತಾದ್ದರಿಂದ ಮನೆಯನ್ನೆಲ್ಲ ಗುಡಿಸಿ ಸಾರಿಸಿಟ್ಟಿದ್ದೇವೆ ಚೊಕ್ಕವಾಗಿ. ರಾತ್ರಿಯೂಟವನ್ನು ಕಳಿಸಿಕೊಡುವೆ. ನೀನು ಯಾವುದಕ್ಕೂ ಸಂಕೋಚಿಸದೇ ಏನಾದರೂ ಬೇಕಿದ್ದರೆ ಹೇಳಿ ಕಳಿಸು ತಪ್ಪದೆ' ಎಂದು ಮುದುಕಿ ಹೇಳಿದಳು.

ತನ್ನ ಮನೆ ಬಾಗಿಲನ್ನೇ ತೆರೆಯುವಾಗಲೂ ಸಹ ಖುರ್ಷೀದನ ಕೈಗಳು ಕಂಪಿಸಲಾರಂಭಿಸಿದ್ದವು. ಇದನ್ನು ಗಮನಿಸಿದ ನಜೀಬ ತಾನೇ ಚಾವಿ ಪಡೆದು ಮನೆ ಬಾಗಿಲು ತೆರೆದ.

ಕಳೆದುಹೋದ ಹದಿನೈದು ವರ್ಷಗಳ ಏನಃ ಮನೆಯಲ್ಲಿ ಎಲ್ಲವೂ ಅದೇ ರೀತಿಯಲ್ಲಿಯೇ ಇತ್ತು. ಪುರುಷರು ವಿಶ್ರಮಿಸುವ ಹಜಾರ, ಪಪ್ಪಾನ ಓದುವ ರೂಮು, ಅಡಿಗೆ ಕೋಣೆ, ಹೆಂಗಸರ ಕೊಠಡಿ, ಅಮ್ಮಾನ ಮಲಗುವ ಮಂಚ, ಪಪ್ಪಾನ ಮೇಜು ಮತ್ತು ತಾನು ಉಪಯೋಗಿಸುತ್ತಿದ್ದ ದೊಡ್ಡ ಮೇಜು. ಹೀಗೆ ಎಲ್ಲವೂ ಅದೇ ಆಗಿವೆ. ತೆಪ್ಪಗಿವೆ, ಮೃದು ಭಾವ ಹೊತ್ತಿಸುತ್ತಿವೆ ಖುರ್ಷೀದ್ ಅಂದುಕೊಂಡ.

ಇದೀಗ ತಾನೇ ಪ್ರೀತಿಯ ಅಮ್ಮ ನೀಟಾಗಿ ಮಡಿಸಿ ಕಲೆ ಹಾಕಿ ಪೇರಿಸಿಟ್ಟಿದ್ದಾಳೊ ಎಂಬಂತೆ ಗೋಡೆ ಕಪಾಟಿನ ಅಂತಸ್ತಿನ ತುಂಬ ಬಟ್ಟೆಗಳು ಗರಿಮುರಿಯಾಗಿ ತುಂಬಿ ಕೊಂಡಿದ್ದವು. ಮೇಜಿನ ಡ್ರಾಯರ್ ತೆಗೆಯಲು ಯತ್ನಿಸಿದ. ಆದರೆ ಅದು ಜ್ಯಾಮ್ ಆಗಿತ್ತು. ತುಂಬಾ ಜೋರಾಗಿ ಎಳೆಯ ಹತ್ತಿದ. ಅವನ ಚಿಕ್ಕ ಪುಟ್ಟ ಸರಂಜಾಮುಗಳು, ವಸ್ತುಗಳು ಗಿಡಿಗಿಡಿದು ತುಂಬಿಕೊಂಡಿದ್ದವು. ಪೆನ್ಸಿಲು, ರಬ್ಬರು, ಪಕ್ಕಾ ಪಟ್ಟಿ, ಇಬ್ನೆ ಶಫಿಯ ಕಾದಂಬರಿ ಹೀಗೆ ಇವೆಲ್ಲ ಮೇಜಿನ ಮೇಲೆ ಹಾಗೇ ಹರಡಿದ್ದವು. ಮೇಜಿನ ಮೇಲಿನ ಧೂಳನ್ನು ನಯವಾಗಿ ಹಾಗೇ ಒರೆಸ ಹೊರಟಾಗ ಆಘಾತಕರವೆಂಬಂತೆ ಮೇಜಿನ ಒಂದಿಷ್ಟು ಭಾಗವನ್ನು ಹಾಳು ಗೆದ್ದಲು ಕೊರೆದಿತ್ತು.

ಪಪ್ಪಾನ ಪುಸ್ತಕಗಳ ಗತಿ ಏನಾಗಿರಬಹುದು? ಆತಂಕವೆನಿಸಿತು.

ಓದುವ ಕೊಠಡಿಗೆ ಲಗುಬಗೆಯಿಂದ ಹೊರಟ. ಪುಸ್ತಕಗಳೆಲ್ಲ ಅದೇ ರೀತಿಯಲ್ಲಿ ಜೋಡಣೆಗೊಂಡಿದ್ದವು. ಇನ್ನು ಬಾಂಬೆಗೆ ಹಿಂತಿರುಗುವಾಗ ಯೂನಿವರ್ಸಿಟಿ ಲೈಬ್ರರಿಗಾಗಲೀ, ಇತರ ಯಾವುದೇ ಪುಸ್ತಕಾಲಯಕ್ಕಾಗಲೀ ಅವುಗಳನ್ನೆಲ್ಲ ಉದಾರವಾಗಿ ನೀಡುವುದೇ ಸರಿ ಎಂದು ನಿಶ್ಚಯಿಸಿದ. ತುಂಡು ವಸ್ತ್ರದಿಂದ ಪುಸ್ತಕಗಳ ಮೇಲಿನ ಧೂಳನ್ನು ಝಾಡಿಸಿದನಾದರೂ, ಚಿನ್ನದಕ್ಷರಗಳ ಮೆರಗಲ್ಲಿ ಮೂಡಿದ ದಪ್ಪದುಬ್ಬುಗಳಲ್ಲಿ ತೆಳ್ಳಗಿನ ಧೂಳು ಪೊರೆ ಹಾಗೇ ಉಳಿಯಿತು. ದಿವಾನ್-ಎ-ಘಾಲಿಬ್, ಮೀರ್ ಕವಿಯ ಹಾಡುಗಳು, ದಿವಾನ್-ಎ-ದಾಗ್ ಹೀಗೆ ಎಲ್ಲವೂ ಅಲ್ಲೇ ಇದ್ದವು.

ಶೆಲ್ಫಿನಿಂದ ಒಂದು ದೊಡ್ಡ ಪುಸ್ತಕ ಹೊರ ತೆಗೆದ. ಗೆದ್ದಲು ಅನೇಕ ಕಡೆ ಕೊರೆದು ತಿಂದಿದ್ದವು. ಪುಸ್ತಕಗಳನ್ನು ಆತ ಸ್ಥಳಾಂತರಿಸಿದ. ಆಗ 'ದಿವಾನ್-ಎ-ಘಾಲಿಬ್'ನ ಜರ್ಮನ್ ಆವೃತ್ತಿಯೊಂದು ಕಣ್ಣಿಗೆ ಬಿತ್ತು. ಆ ಪುಸ್ತಕದಿಂದೇನೂ ಪ್ರಯೋಜನವಾಗದೆಂದನಿಸಿತು. ಮುಟ್ಟಿದರೆ ಸಾಕು ಕಿತ್ತು ಬರುತ್ತಿದ್ದ ಕೊಳೆಯಿಂದ ಮುದ್ದೆಯಾದ ಅದರ ಸ್ಥಿತಿಗೆ ದಂಗೇ ಬಡಿಯಿತು ಅವನಿಗೆ. 'ಫರಿಶ್ತಾನ ಚರಿತ್ರೆ' ಎಂಬ ಪುಸ್ತಕ ಎಲ್ಲಾದರೂ ದೊರಕಿದ್ದರೆ ಬೇಕಿತ್ತು ಅವಶ್ಯವಾಗಿ ಎಂದು ಹಲವು ಗೆಳೆಯರು ಲಂಡನ್‌ನಲ್ಲಿ ಇವನ ಬಳಿ ಅಂದುಕೊಂಡಾಗ ತುಂಬಾ ಹೆಮ್ಮೆಯಿಂದ ತನ್ನ ಪಪ್ಪನ ಸಂಗ್ರಹದಲ್ಲಿ ಅದೂ ಇದೆ ಎಂದು ಹೇಳಿಕೊಂಡಿದ್ದ. ಶೆಲ್ಫಿನ ಅಂತಸ್ತುಗಳಲ್ಲಿ ಆ ಪುಸ್ತಕದ ಪ್ರತಿಗಾಗಿ ತಡಕಾಡಿದ. ಯಾವ ಸ್ಥಿತಿಯಲ್ಲಿದೆಯೋ ಅದು ಎಂಬ ಆತಂಕ ಬೇರೆ. ಕಟ್ಟಕಡೆಗೆ ಪುಸ್ತಕದ ಪ್ರತಿ ಕಾಣಿಸಿತು. ಹೊರಗೆಳೆದು ತೆಗೆದ, ಉಳಿದ ಪುಸ್ತಕಗಳಿಗೊದಗಿದ ಗತಿಯೇ ಈ ಪುಸ್ತಕಕ್ಕೂ ಒದಗಿತ್ತು. ಹಾಳು ಗೆದ್ದಲು ಕೊರೆತ, ಪುಸ್ತಕ ಹಿಡಿಯುತ್ತಿದ್ದಂತೆ ಅದರೊಳಗಿಂದ ಹಲ್ಲಿಗಳು ಬಿದ್ದವು.

೧೯೪೪ರ ಒಂದು ಸ್ಫೋಟದ ಘಟನೆ ಇವನ ನೆನಪಿಗೆ ಬಂತು. ಆಗ ಬಾಂಬೆಯಲ್ಲಿ ಮದ್ದು ಗುಂಡುಗಳಿಂದ ತುಂಬಿದ್ದ ನಾವೆಯೊಂದು ಸ್ಫೋಟಗೊಂಡು ಉರಿದು ಹೋಗಿದ್ದ ಘಟನೆ ಅದು. ಸ್ಫೋಟದ ಘಾತಕ್ಕೆ ಇಡೀ ಬಾಂಬೆಯೇ ಅದುರಿತ್ತು - ಭೂಕಂಪಕ್ಕೆ ತುತ್ತಾದಂತೆ. ಕಟ್ಟಡಗಳು ನಡುಗಿದ್ದವು. ಕಿಟಕಿ ಗಾಜುಗಳು ರಟರಟ ಅಲ್ಲಾಡಿ ತುಂಡಾದವು. ತಮ್ಮ ನಿವಾಸಗಳಿಂದ ಹುಚ್ಚೆದ್ದು ಓಡಿ ಹೊರ ಬಂದಿದ್ದರು ಜನ. ಸ್ಫೋಟದ ಹೊಡೆತಕ್ಕೆ ಕಟ್ಟು ಕಟ್ಟುಗಳಲ್ಲಿ ತುಂಬಿಟ್ಟ ಖೋಟಾ ನೋಟುಗಳ ಪೆಠಾರಿ ಮುರುದ್ದ ಸಿಡಿದು ಇಡಿಯಾಗಿ ಒಂದೆಡೆ ಬಿದ್ದಾಗಲೂ ಒಳಗಿನ ನೋಟುಗಳೆಲ್ಲ ಸುರಕ್ಷಿತವಾಗಿಯೇ ಇದ್ದವು ಎಂಬಂತಿತ್ತು ಮೇಲ್ನೋಟಕ್ಕೆ. ಆದರೆ ನಿಜ ಸ್ಥಿತಿಯೇ ಬೇರೆ. ಒಳಗಿನ ಕಟ್ಟು ಖೋಟಾ ನೋಟುಗಳು ಬೂದಿಯ ರಾಶಿಯಾಗಿದ್ದವು ಒಳಗೇ. ಮುಟ್ಟಿದಾಗ ಬೂದಿಯ ಧೂಳು ಬಸಬಸ ಕೈಗೆ ಹತ್ತುತ್ತಿತ್ತು. ಈಗ ಇಲ್ಲಿ ಖುರ್ಷೀದನ ಮನೆಯಲ್ಲಿ ಅಮೂಲ್ಯವಾದ ಪುಸ್ತಕಗಳ ರಾಶಿಯ ಗತಿಗೂ ಅದೇ ದುರವಸ್ಥೆ ಒದಗಿತ್ತು.

ಖುರ್ಷೀದ್ ವಿಶ್ರಾಂತಿ ಕೊಠಡಿಗೆ ಬಂದಾಗ ಪ್ರಯಾಣದ ಆಯಾಸ ಪರಿಹಾರಕ್ಕೆಂದು ವಿಶ್ರಮಿಸಿದ ನಜೀಬ್ ಕಂಡ. ಶಹೀದಾ ಅತ್ತೆ ಕಳಿಸಿದ ರಾತ್ರಿಯೂಟ ಸೊಗಸಾಗಿದ್ದರೂ ಗೆಳೆಯರಿಬ್ಬರು ವಿಶೇಷ ಗೆಲುವಿನಿಂದೇನು ತಿನ್ನಲಿಲ್ಲ ಅದನ್ನು. ಮೌನದೊಂದಿಗೇ ಸಪ್ಪೆಯಾಗಿ ಊಟ ಮುಗಿಸಿದರು. ಬಾಲ್ಯದಲ್ಲಿ ಊಟ ಬಡಿಸುವ ಸಮಯಕ್ಕೆ ಏನಿಲ್ಲೆಂದರೂ ಹದಿನೈದು ಇಪ್ಪತ್ತು ಜನ ಊಟಕ್ಕಾಗಿ ಕುಳಿತಿರುತ್ತಿದ್ದರು. ಕ್ಷಣಿಕವಾದ ಸಂಭ್ರಮವೊಂದು ಹಿಂದಿನ ದಿನಗಳ ನೆನಪಿಂದಾಗಿ ಸುಳಿದ ಬಿಸಿ ಎಬ್ಬಿಸಿತು ಖುರ್ಷೀದನಿಗೆ. ಇಡೀ ಮನೆಯಲ್ಲಿ ಸಂಭ್ರಮ ತುಂಬಿತೆನಿಸಿದ ಕ್ಷಣಿಕ ಭ್ರಮೆಯಿಂದ ಭಾವುಕಗೊಂಡ. ಮೋಂಬತ್ತಿ ತುಂಬಿದ ದೀಪಗಳ ಇಳಿಬಿಟ್ಟ ತೂಗು ಪುಂಜ ಭಕ್ಕೆಂದು ಉರಿದುಕೊಂಡಂತೆ, ಮನೆಯ ಊಟದ ಪಾತ್ರೆಗಳು ಚಿಂಚಿಣಿಸಿದಂತೆ, ಓ ಅದು, ಓ ಇದು ಎಂದು ಬಿರಿಯಾನಿ, ದನದ ಮಾಂಸ, ಒಗ್ಗರಣೆ ಸಾರು, ಹುರುಳಿ ಚಟ್ನಿ, ಬಸುಮತಿ ಅಕ್ಕಿಯ ಅನ್ನ, ಮಾತು, ಕೇಕೆ, ಹಾಸ್ಯ ಲಾಸ್ಯ ಒಂದೋ ಎರಡೋ.... ಹೀಗೇ ಇಡೀ ಊಟದ ಮನೆಯೇ ಸಂಭ್ರಮದಿಂದ ಕಡಲಾಗಿ ತುಯ್ದಂತೆ...... ಆ ಹಿಂದಿನ ನೆನಪು ದೃಶ್ಯವಾಗಿ ಭ್ರಮೆಯಾಗಿ ಆ ಕ್ಷಣದ ಸತ್ಯವಾಗಿ ಮಿಂಚಂತೆ ಮಿಂಚಿ ಕೋರೈಸಿ ಸ್ತಬ್ಧವಾಗಿ ಹೋಯ್ತು ಅವನ ಮನದಾಳದಲ್ಲಿ. ಮರುಕ್ಷಣವೇ ಮತ್ತೆ ಜಾರಿ ಹೋದ ಹದಿನೈದು ವರ್ಷಗಳು ಬೊಗಸೆಯಲ್ಲಿ ಉಕ್ಕಿಸಿಕೊಂಡು ಹರಡಿದ ದಟ್ಟ ಮೌನ ಗೋಡೆಗಳ ನಡುವೆ ರಾಕ್ಷಸಾಕಾರದ ಕಗ್ಗತ್ತಲು ಮಾತ್ರ ಉಳಿದುಕೊಂಡವು.

'ಬದಲಾದ ಹಳ್ಳಿಯ ಈ ಅಗಾಧ ನೀರವತೆಯನ್ನು ಕುರಿತು ಯಾರೂ ಸರಿಯಾಗಿ ತಿಳಿಸಿರಲಿಲ್ಲವಲ್ಲ' ಎಂದು ನಜೀಬ್ ಮೌನ ಮುರಿದು ನುಡಿದ. 'ನಿಜಕ್ಕೂ ಇದು ಆಶ್ಚರ್ಯವಾದದ್ದು'.

'ಯಾಕೆಂದರೆ ಹಳ್ಳಿಯೂರಿಗೆ ಯಾರೂ ಬರುವುದೇ ಇಲ್ಲ ಅಲ್ಲವೆ?'

'ಯಾರಾದರೂ ಥಕ್ಕನೆ ಬಂದರೂ ಬಂದವರು ವಾಪಸಾಗಲು ತವಕಿಸುತ್ತಾರೆ ಅಲ್ಲವೆ?' ನಜೀಬ್ ಮಾರ್ನುಡಿದ.

ಕಿಟಕಿಯಾಚೆಗೆ ಖುರ್ಷೀದ್ ದೃಷ್ಟಿ ಬೀರಿದ. ಬೀದಿ ದೀಪಗಳು ಹೊತ್ತಿಕೊಂಡಿದ್ದವು. ಉರಿದ ದೀಪಗಳ ಬೆಳಕಲ್ಲಿ ಬೀದಿಗಳ ನಿರ್ಜೀವ ಮೌನ, ನಿರ್ಜನ ಒಡಲು ಸ್ಪಷ್ಟವಾಗಿ ಕಾಣಿಸುತ್ತಿದ್ದವು. ಮನೆಗಳೆಲ್ಲ ತಮ್ಮಲ್ಲಿ ವಾಸಕ್ಕಾಗಿ ಬರುವ ನಿವಾಸಿಗಳಿಗಾಗಿ ಕಾತರಿಸಿದಂತಿದ್ದವು. ನದಿಯ ಕಡೆಯಿಂದ ಬೀಸಿ ಬಂದ ಬಲವಾದ ಗಾಳಿಯೊಂದು ಬಾಗಿಲಿನ ಚಿಲಕದ ಸರಪಳಿಯನ್ನು ಹೊಯ್ದಾಡಿಸಿತು. ಗಾಳಿಯ ರಭಸಕ್ಕೆ ಕಿಡಕಿಯ ಬಾಗಿಲು ರಪ್ಪೆಂದು ಬಡಿದುಕೊಂಡ ಸದ್ದು ಕಿವಿಗೆ ಅಪ್ಪಳಿಸಿತು.

ರಪ್ಪೆಂದು ಕಿಟಕಿ ಬಡಿದ ಸದ್ದಿಗೆ ಕರಗಿದ ಕಾಲ ಮತ್ತೆ ಖುರ್ಷೀದನಿಗೆ ಭ್ರಮೆಯ ದಪ್ಪ ಕೆನೆಯಲ್ಲಿ ಮುಳುಗಿಸತೊಡಗಿತು. ಓಹ್ ಅವರೆಲ್ಲ ದಂಡು ದಂಡಾಗಿ ಹಳ್ಳಿಯೂರಿಗೆ ಮರಳುತ್ತಿದ್ದಾರೆ ಪರ ಊರಿಂದ, ಪರ ದೇಶಗಳಿಂದ ಬಂಗಾರದ, ಬೆಳ್ಳಿಯ ವಿವಿಧ ಆಭರಣಗಳ ಛಕ್ಕೆಂದ ಮೆರಗಿನ ವ್ಯಾಪ್ತಿಯಲ್ಲಿ ಅವನ್ನೆಲ್ಲ ತಲೆಗೆಲ್ಲ ಸೊಂಪಾಗಿ ಧರಿಸಿಕೊಂಡು ಹಳ್ಳಿಯೂರಿಗೆ ದಾಪುಗಾಲಿಕ್ಕಿ ಬರುತ್ತಿದ್ದಾರೆ. ಅವರೆಲ್ಲ ಗುಳೆ ಎತ್ತಿ ಬರುತ್ತಿದ್ದಾರೆ. ಮಣಗಟ್ಟಲೆ ಬಂಗಾರ, ರತ್ನ, ಮುತ್ತುಗಳ ಮೂಟೆ ಅವರ ತಲೆಯ ಮೇಲಕ್ಕೆ. ಇನ್ನೇನು ರತ್ನಮಯ ಕಾಂತಿಯಿಂದ ಹೊಮ್ಮಿ ಮನೆ ಮನೆಯ ಬಾಗಿಲುಗಳು ತಮ್ಮಷ್ಟಕ್ಕೆ ತಾವೇ ತೆರೆದುಕೊಳ್ಳಲಿವೆ. ಮಕ್ಕಳು ಮರಿಗಳ ಕಲರವದಲ್ಲಿ ಹಳ್ಳಿಯೂರಿನ ಬೀದಿ ಬೀದಿಗಳು ನಿನಾದಿಸಲಿವೆ... ನಿನಾದಿಸಲಿವೆ..... ಕೋರೈಸಲಿವೆ.....

ಇವೆ..... ಇವೆ.......

ಇಲ್ಲ, ಭ್ರಮೆ ಸತ್ಯವಾಗಲೇ ಇಲ್ಲ. ಬೀಸಿ ಬಂದ ಬಲವಾದ ಗಾಳಿ ಮಾತ್ರ ಕಿಡಕಿ ಬಾಗಿಲುಗಳನ್ನು ತಡಕಾಡಿ ಸದ್ದೆಬ್ಬಿಸಿ ಉದ್ದಕ್ಕೂ ಹರಡಿ ಹೋಯ್ತು.

ಶಹೀದಾ ಅತ್ತೆ ಕಳಿಸಿದ ಆಳುಮಗಳು ಮಾತ್ರ ಊಟದ ಪಾತ್ರೆ ಹೊತ್ತೊಯ್ಯಲು ಬಂದಳು ಅಲ್ಲಿ. 'ನಿಮಗೆ ಯಾರು ಇಲ್ಲಿ ದಿನ ನಿತ್ಯದ ವ್ಯಾಪಾರದ ಕೆಲಸ ಪೂರೈಸಿ ಕೊಡುತ್ತಾರೆ' ಎಂದಷ್ಟೇ ಖುರ್ಷೀದ್ ಅವಳಲ್ಲಿ ವಿಚಾರಿಸಿದ.

'ದನಕರುಗಳು ಹಾಲು ಕೊಡುತ್ತವೆ' ಅವಳು ಉತ್ತರಿಸಿದಳು. 'ಪ್ರತಿ ಸೋಮವಾರದ ಸಂತೆಗೆ ನಾವೇ ಹೋಗಿ ನಮಗೆ ಬೇಕಾದವುಗಳನ್ನು ನಾವೇ ತರುತ್ತೇವೆ. ಜನಾಬ್ ಇಬ್ರಾಹಿಂ ಮತ್ತು ಮೌಲ್ವಿ ಬಶೀರ ಸಾಹೇಬರು ನಮಗೆ ಬೇಕಾದವುಗಳನ್ನು ಕೇಳಿ ತಿಳಿದು ಪ್ರತಿ ಮನೆಯವರ ಬೇಕುಬೇಡಿಕೆಗಳ ಸರಕುಗಳನ್ನು ಮಾರುಕಟ್ಟೆಯಿಂದ ತರುತ್ತಾರೆ. ಇನ್ನೆಷ್ಟು ದಿನಗಳ ಕಾಲ ತಾವು ಇಲ್ಲಿರಬಯಸುವಿರಿ' ಎಂದು ಆಳುಮಗಳು ಜೋರಾಗಿಯೇ ಕೇಳಿದಳು.

ಸಂಕೋಚದಿಂದ ಮುಖಮುಖ ನೋಡಿಕೊಂಡ ಖುರ್ಷೀದ್ ಮತ್ತು ನಜೀಬ್ ಮನೆಯಲ್ಲಿಯೇ ಬೇರೆಡೆಗೆ ತೆರಳಿದರು. ನಂತರ ಖುರ್ಷೀದ್ ಬಚ್ಚಲು ಮನೆಗೆ ಹೋದ.

'ಶಹೀದಾ ತಾಯಿ ಈ ವಿಷಯ ಕೇಳಿ ತಿಳಿಯಲು ನನಗೆ ತಿಳಿಸಿದ್ದಾರೆ'... ಆಳು ಮಗಳು ನುಡಿದಳಲ್ಲದೇ ಏನಾದರೊಂದು ಉತ್ತರವನ್ನು ಅವಶ್ಯವಾಗಿ ನೀಡಬೇಕು ನೀವು ಎಂಬಂತೆ ಒತ್ತಾಯದ ನೋಟ ಬೀರಿದಳು.

ಬಚ್ಚಲು ಮನೆಯಿಂದ ವಾಪಸಾದ ಖುರ್ಷೀದ. ಈ ಮನೆಯನ್ನು ಗೋಡೆಗಳ ನಡುವಿನ ಒಂದು ಮರುಭೂಮಿಯಾಗಿಸದಿರು ಎಂದು ಆರ್ತವಾಗಿ ಕೇಳಿದಂತೆ ದನಿಯೊಂದು

ಕೇಳಿಸಿತು ಅವನಿಗೆ. `ಎಲ್ಲರೂ ಹೊರಟು ಹೋಗಿದ್ದಾರೆ, ನಿರ್ಜನ ಭೂಮಿ' ಎಂದು ಗೋಡೆಗಳು ಮಾತನಾಡಿದಂತೆ ಕೇಳಿಸಿತು. `ನೀವಿಬ್ಬರೇ ಬಂದವರು, ಬಂದ ನೀವೂ ಹೊರಟು ಹೋದರೆ ಯಾರು ಬರುವವರು?'

`ನಿನಗೆ ಉತ್ತರ ಬೇಕೇ ಬೇಕೇನು? ಇದೀಗಲೇ ಉತ್ತರಿಸಬೇಕೇನು?' ನಜೀಬ ಸಿಡುಕಿದ.

`ನಾಳೆ ಮುಂಜಾನೆಯೇ ವಾಪಸಾಗುತ್ತೇವೆ' ಖುರ್ಷೀದ್ ನಡುವೆ ಬಂದು ಉತ್ತರಿಸಿದ. ಅಲ್ಲಿದ್ದರೆ ನಿಂತ ಗೋಡೆಗಳು ಬಲವಾದ ಬೇಲಿ ಬಿಗಿದು ಬಂಧಿಸಿಬಿಡಬಹುದೇನೋ ಎಂಬ ಭಯ ಕಾಡಿತು ಅವನಿಗೆ.

ಬೆಳಿಗ್ಗೆ ಮುಂಜಾನೆಯ ಉಪಹಾರ ಮುಗಿಸಿ ಮನೆಯಿಂದ ಹೊರಬಂದಾಗ ಹೊತ್ತು ನಿಧಾನವಾಗಿ ಏರಿತ್ತು. ನಿನ್ನೆ ಬಂದಿಳಿದ ಗಾಡಿ ಮತ್ತದೇ ಮನೆಯ ಅಂಗಳಕ್ಕೆ ಕುಟಕುಟ ಸದ್ದಿನೊಂದಿಗೆ ಬಂದಾಗ ನಜೀಬ ಮನೆಯ ಬೀಗ ಹಾಕತೊಡಗಿದ್ದ. ಇದೇನಿದು ಎಂಬಂತೆ ನಜೀಬನ ಬಳಿ ಖುರ್ಷೀದ್ ನೋಡಿದ.

`ಇಲ್ಲಪ್ಪ, ನಾನೇನು ಗಾಡಿಯವನಿಗೆ ಬರಲು ಹೇಳಿಲ್ಲ, ಬಹುಶಃ ಶಹೀದತ್ತೆ ಅವನಿಗೆ ಬರ ಹೇಳಿ ಕಳಿಸಿರಬಹುದು `ಖುರ್ಷೀದನ ಪ್ರಶ್ನಾರ್ಥಕ ನೋಟದ ಅರ್ಥ' ಗ್ರಹಿಸಿದ ನಜೀಬ ಹೀಗೆ ನುಡಿದ.

ಮನೆಯ ಬಾಗಿಲ ಹೊಸಿಲ ಬಳಿಯೇ ಗಾಡಿ ಬಂದು ನಿಂತಿತ್ತು. ವೃದ್ಧನಾಗಿದ್ದ ಆ ಗಾಡಿಯವನ ನೋಟ ಅಣಕಿಸುವಂತಿತ್ತು. ಇಲ್ಲಿನ ನಿಮ್ಮ ವಾಸ್ತವ್ಯದ ಅವಧಿಯನ್ನು ನೀವು ಹಠಾತ್ತನೆ ಮೊಟಕುಗೊಳಿಸಲಿದ್ದೀರೆಂಬುದು ಮೊದಲೇ ನನಗೆ ತಿಳಿದಿತ್ತು ಎಂದು ಹೇಳುವಂತಿತ್ತು ಅವನ ನೋಟ.

ಗೆಳೆಯರಿಬ್ಬರೂ ಗಾಡಿ ಏರಿದರು.

ಖುರ್ಷೀದನ ದೃಷ್ಟಿ, ಮೆಲ್ಲಗೆ ನಿಧಾನ ತೆರೆದ ಕಿಟಕಿಯ ಮೇಲೆ ಚಲಿಸಿತು ಮತ್ತು ಅಲ್ಲೇ ಅದು ಸ್ಥಿರಗೊಂಡಿತು.

ಕಾಲದ ದೀರ್ಘ ಅವಧಿ ಒಂದಕ್ಕೆ ಸರಿದ ಭಾಸ ಅವನಿಗೆ.

ಹೌದು ಇಂಥದೇ ಒಂದು ತೆರದ ಕಿಟಕಿಯ ಹೊರಗೆ, ಇದೇ ಹಳ್ಳಿ ಊರಲ್ಲಿ, ಅದು ಅದು..... ಅಲೌಕಿಕವಾದ ಮುಗ್ಧತೆಯ ನೋಟ ಹೊಂದಿದ ಹದಿಮೂರು ವರ್ಷಗಳ ಹದಿಹರೆಯದ ಕನ್ನಿಕೆಯ ಸ್ಫಟಿಕ ಭಾವದ ಸಂಪನ್ನತೆಯನ್ನು ನೆನೆಸಿಕೊಂಡ. ಆ ಅವಳ ಕಣ್ಣುಗಳು ಇದೇ ಬೀದಿಯನ್ನು ಆ ಕಿಟಕಿಯ ಮೇಲಿಂದ ನೋಡುತ್ತಿರುತ್ತಿದ್ದವಲ್ಲವೇ?

ಚೂಪು ಮೊಗ, ಹಸ್ತಿದಂತದ ಮೈ ಬಣ್ಣ, ಮುಗ್ಧ ನೋಟ, ಪ್ರೇಮಪೂರ್ವಕ ಭಾವ.... ಭೂತಕಾಲಕ್ಕೆ ಸಂದು ಹೋದ ಹದಿಹರಯದ ಆ ದಿನಗಳಂದು.....

ಎಷ್ಟು ಹೊತ್ತೇ ಈ ಇದೇ ಬೀದಿಯಲ್ಲಿ ತಾನು ನಿಂತಿರಲಿ ಪ್ರೇಮ ಯಾಚನೆಯ ಆ ದಿವ್ಯ ಕಣ್ಣುಗಳು ತನ್ನನ್ನೇ ಎವೆಯಿಕ್ಕದೆ ನೋಡುತ್ತ ಆರ್ದ್ರತೆಯನ್ನು ಸೃಷ್ಟಿಸುತ್ತಿದ್ದವು ಅಲ್ಲವೆ? ತನ್ನನ್ನು ನೋಡುತ್ತ ನೋಡುತ್ತ ಸ್ವತಃ ಅವಳ ಮುಖವೇ ಸುಂದರವಾದ ಸೂರ್ಯಕಾಂತಿ ಹೂವಿನಂತೆ ಕಾಂತಿ ಪೂರ್ಣಗೊಳ್ಳುತ್ತಿತ್ತಲ್ಲವೆ?

ಆ ಕಾಂತಿಮತಿಯ ಪೌರ್ಣಿಮೆಯ ಮುಖ ಮಂಡಲವನ್ನು ಖುರ್ಷೀದ್ ಲಂಡನ್ನಿನಲ್ಲಿರಲಿ, ಡರ್ಬನ್ನಿನಲ್ಲಿರಲಿ, ಬಾಂಬೆಯಲ್ಲೇ ಇರಲಿ ಆಗಾಗ ನೆನಪಿಸಿಕೊಳ್ಳುತ್ತಿದ್ದ. ನಿಸ್ವಾರ್ಥ ನೋಟ, ಕಪಟವಿರದ ಪ್ರೇಮ, ಪ್ರೇಮವೊಂದೇ ಉದ್ದೇಶವಾದ ಪ್ರಫುಲ್ಲ ಭಾವ.

ಆ ಕನ್ಯೆ ಹಾಗೂ ಈ ಹುಡುಗನ ವಯಸ್ಸೇ ಆಗ ಅಂಥದು. ಪ್ರೀತಿಯ ಭಾವಕ್ಕೆ ಮುಗ್ಧವಾಗಿ ತುಡಿಯುವ ಅಂತರ್ಯದ ಜೀವಸೆಲೆ. ಹುಡುಗನಿಗೆ ಹುಡುಗಿ ಆರಾಧನಾ ಭಾವದಿಂದ ತನ್ನನ್ನು ದಿಟ್ಟಿಸುತ್ತಿದ್ದಾಳಲ್ಲ ಎಂಬುದೇ ಪುಳಕದ ಕಾರಂಜಿ ಪುಟಿತ. ಕೆಲವು ಸಲ ಸಂಕೋಚವೆನಿಸುವ ನಾಚಿಕೆ ತೆಳುಪೊರೆಯಿಂದ ಉಳಿದವರೆಡೆ ನೋಡಿ ಅವರು ತನ್ನನ್ನು ಗಮನಿಸಿರಬಹುದೇ ಎಂದು ಅಂದುಕೊಳ್ಳುತ್ತಿದ್ದ. ಆದರೆ ಮನೆಯಿಂದ ಹೊರಬಿದ್ದಂತೆ ಪ್ರೇಮದಾರಾಧನೆ ತೋರುವ ಆ ಮುಖಕ್ಕಾಗಿ ಈತನ ಕಣ್ಣುಗಳು ಹಾತೊರೆಯುತ್ತಿದ್ದವು.

ಆದೊಂದು ದಿನ ಆ ಬೀದಿಯಲ್ಲಿ ಶಹನಾಯಿಯ ದನಿಯ ಮಧುರತೆಯನ್ನು ಆಲಿಸಿದಾಗ ಈತ ಅಗಾಧವಾದ ಪ್ರೇಮದ ಒಳ ಆಳವನ್ನು ಅಳೆಯಲು ಮುಂದಾದ ಕೂಡ. ಇಡೀ ಬೀದಿಯ ತುಂಬ ಗ್ಯಾಸ್ ಲೈಟಿನ ಭುಸ್ಸೆಂದು ಉರಿದ ಪ್ರಖರ ಬೆಳಕು, ಸಂಗಡ ಅರಳಿ ಬಿರಿದ ಹೂಗಳ ಪಕಳೆ ಎರಚಿದ ದಾರಿ. ತಲೆ ತಗ್ಗಿಸಿ ತೆಳು ವಸ್ತ್ರದ ಮರೆಯಲ್ಲಿ ಮುಚ್ಚಿದ ಮುಖದ ಸೌರಭವನ್ನು ಈತ ಗಮನಿಸಿದ್ದ. ಅಲ್ಲದೇ ಕೊನೆಗೆ ಪುಷ್ಪಾಲಂಕೃತ ಕಾರಿನ ಒಳಗೆ ಆ ಸೌರಭದ ಮೃದು ದೇಹ ಸೇರಿಕೊಳ್ಳ ತೊಡಗಿದಾಗ ಓರೆ ನೋಟದ ದಿವ್ಯತೆಯಲ್ಲಿ ಈತನನ್ನೇ ನೋಡಿತ್ತು.

ನಂತರ ಮೃದು ಮೃದುಲವಾದ ಮುಖದ ಆ ಅರಸಿಯನ್ನು ಹೊತ್ತು ಕಾರು ದೃಷ್ಟಿಯ ಆಚೆಗೆಲ್ಲೋ ಮರೆಯಾಗಿ ಹೋಗಿತ್ತು.

ಮತ್ತೆ ಬಂತು ವರ್ತಮಾನ. ಖುರ್ಷೀದ್ ಈಗಲೂ ಈ ಕಿಟಕಿಯ ಬಳಿ ನೋಡಿದ, ಹೊರಗಿಣುಕಿದ್ದ ನಡು ವಯಸ್ಸಿನ ಮಹಿಳೆಯ ಮುಖ ಅವಳದ್ದೇ ಆಗಿರಬಹುದೆ?

'ಇಲ್ಲ.... ಸಾಧ್ಯವಾಗದು.... ನಾನು ಗುರುತಿಸಲಾರೆ.....'

ಆ ಎಲ್ಲ ಸೌರಭಗಳು ಕಾಲನ ಕರಗಸಕ್ಕೆ ಸಿಕ್ಕು ಮಂಕುಗೊಂಡಂತಿವೆ.

ಆದರೆ ಆ ಮಹಿಳೆಯ ಕಣ್ಣುಗಳು ಈತನನ್ನೇ ದೃಷ್ಟಿಸಿದ್ದವು.

ಈತ ಅವಳೆಡೆ ನೋಡಿ ಮುಗುಳ್ನಕ್ಕ. ಆ ನಡುವಯಸ್ಕಳೂ ಪ್ರತಿಯಾಗಿ ಮುಗುಳ್ನಗು ಬೀರಿದಳು. ಆಗ ನಿಧಾನವಾಗಿ ಜೋಲಿಯೊಂದಿಗೆ ಗಾಡಿ ಮುಂದೆ ಸಾಗಿತು. ನಿಯಂತ್ರಿಸಲಾಗದ ಪರಿಚಲನೆಯೊಂದಿಗೆ ಖುರ್ಷೀದನ ನೋಟ ಆ ಮಹಿಳೆಯತ್ತಲೇ ವಾಲಿತು. ಮುಚ್ಚಿದ ಮನೆಗಳು, ಮುಚ್ಚಿದ ಬಾಗಿಲುಗಳು. ಇಷ್ಟಾದರೂ ತುಸುವೇ ತೆರೆದ ಕಿಡಕಿ ಬಾಗಿಲುಗಳ ಮೂಲಕ ಹಲವು ಮುಖಗಳು ಈತನತ್ತ ಇಣುಕುತ್ತಲೇ ಇದ್ದವು. ಮಿಕ್ಕುಳಿದ ಜೀವಿತದ ಅವಧಿಯಲ್ಲಿ ತಾನು ಸದಾ ನೆನಪಿಟ್ಟುಕೊಳ್ಳಲೇಬೇಕು ಇವನ್ನೆಲ್ಲ ಎಂಬಂತೆ ಪ್ರತಿಯೊಂದನ್ನೂ ದೀರ್ಘವಾಗಿ ದಿಟ್ಟಿಸಿ ನೋಡುತ್ತಲೇ ಇದ್ದ ಖುರ್ಷೀದ.

ಬೀದಿಯ ಕೊನೆಯ ತಿರುವಲ್ಲಿ ಗಾಡಿ ಹೊರಳಿಕೊಂಡಂತೆ ಕಡೆಗೆ - ಈ ಕಿಟಕಿಯಿಂದ ಹೊರಗಿಣುಕಿ ಇವನತ್ತ ಮುಗುಳ್ನಕ್ಕ ಮಹಿಳೆ ಸಾಧ್ಯವಾದಷ್ಟು ಮುಖ ಹೊರ ಚಾಚಿ ಇವನತ್ತಲೇ ದಿಟ್ಟಿಸಿದಂತೆ ಈತನಿಗನಿಸಿತು.

ಈತ ಮಹಿಳೆಯತ್ತ ಕೈಯಾಡಿಸಿದ. ಅವಳೂ ಕೈಯಾಡಿಸಿದಳು. ವಿದಾಯದ ಘಟ್ಟದ ಮೃದು ಭಾವಗಳ ವಿನಿಮಯವೇ ಇದು....? ಅಥವಾ.... ತನ್ನ ಭ್ರಮೆಯೊ.... ಏನೂ ಅರ್ಥವಾಗಲಿಲ್ಲ ಇವನಿಗೆ.

ಮತ್ತೊಮ್ಮೆ ಗೆಳೆಯರಿಬ್ಬರು ನಿನ್ನೆ ಬಂದಿದ್ದ ಅದೇ ದಾರಿಯ ಗುಂಟ ಹಿಂತಿರುಗಿ ಹೊರಟಿದ್ದರು. ಸೊಗಸಾಗಿ, ಭದ್ರವಾಗಿ ಕಟ್ಟಿದ ಇಕ್ಕೆಲದ ಸೌಧಗಳು. ಇಲ್ಲಿ ಮನೆಯಿದ್ದೂ ಪರದೇಶಿಗಳಾದ ಆ ಜನರೆಲ್ಲ ಎಲ್ಲೆಲ್ಲಿ ಎಂದು ದೂರ ಹೋದರು ಸಾಗಿ? ಸೌಧಗಳ ದೊಡ್ಡ ಹಿಂಡೇ ಗೆಳೆಯರ ದಾರಿಯ ನೇಪಥ್ಯಕ್ಕೆ ಸರಿದು ಹೋಗತೊಡಗಿದ್ದವು. ಖುರ್ಷೀದನಿಗೆ ದೊಡ್ಡ ನಿಟ್ಟುಸಿರೊಂದು ಹೊರಬಂತು. ಹಿಂದಣ ಒರಗುಮೆತ್ತೆಗೆ ಹಿಂದಕ್ಕೊರಗಿ ಕಣ್ಣುಗಳನ್ನು ಮುಚ್ಚಿಕೊಂಡ ಗಾಡಿಯಲ್ಲಿ.

ಗಾಡಿಯವನು ಎಷ್ಟೇ ಪ್ರಯತ್ನಿಸಿದರೂ ಕುದುರೆ‌ಯೇನು ಜೋರಾಗಿ ಓಡುವ ಪ್ರಯತ್ನದಲ್ಲಿದ್ದಂತಿರಲಿಲ್ಲ. ಭೂಮಿಯ ಅಂತರ್ಜಲ ಪೂರೈಕೆಯ ಸಲುವಾಗಿ ನಿರ್ಮಿಸಿದ ಹೌದಿನ ಕಡೆ ಗಾಡಿ ಹೊರಳಿಕೊಳ್ಳುತ್ತಿದ್ದಾಗ, ಕೊರೆಯುವ ಚಳಿಗಾಳಿ ಖುರ್ಷೀದನ ಮೈ ಕೊರೆದಾಗ ತನ್ನ ಕಣ್ಣುಗಳನ್ನು ತೆರೆದ. ನದಿಯ ಮೇಲ್ಭಾಗದಿಂದ ಸಾಗತೊಡಗಿದ್ದರು ಆಗ ಅವರು. ನದಿ, ಮರಗಳ ಹಸಿರು ತೋಪು, ಹಕ್ಕಿ ಹಿಂಡು, ಆ ನಿಶ್ಚಲ ವಾತಾವರಣ, ಗಾಳಿ ಇವೆಲ್ಲ ಏನೂ ಬದಲಾವಣೆ ಇರದ, ಎಂದೂ ಅದೇ ಆಗಿರುವ ಸ್ಥಾಯಿ ಭಾವದಲ್ಲಿದ್ದಂತೆ

ಕಂಡವು. ಕೆಳಗಿ ಸಾಗಿದ್ದ ತೊರೆಯ ಮೇಲೆ ತನ್ನ ಪ್ರತಿಬಿಂಬವಿರುವುದನ್ನು ಆತ ಕಂಡ. ಬಹುಶಃ ಬದುಕಿನಲ್ಲಿ ಈ ನದಿಯನ್ನು ಕಟ್ಟಕಡೆಯ ಬಾರಿಗೆ ನೋಡುತ್ತಿದ್ದೇನೆ ನಾನು ಎನಿಸಿ ಎದೆ ಭಾರವೆನಿಸಿತು.

ಬೀಸುತ್ತಿದ್ದ ಗಾಳಿಯ ರಭಸಕ್ಕೆ ತಂತಮ್ಮ ತೊಟ್ಟು ಕಳಚಿ ಮರಮರದ ಗೆಲ್ಲು, ಕಾಂಡಗಳಿಂದ ಉರುಳಿ ಗಾಳಿಯಲ್ಲಿ ತೇಲಿ ಸುಳಿ ಸುತ್ತಿ ಗಿರಕಿ ಹೊಡೆದ ಎಲೆಗಳು ಹೊಯ್ದಾಡಿದವು ಸುತ್ತ. ಉರುಳುರುಳಿ ಬಂದು ಗಿಲುಕಿಯಾಡಿ ಎಲೆಯೊಂದು ಖುರ್ಷೀದನ ತೊಡೆಯ ಮೇಲೇ ಬಂದು ಬಿತ್ತು. ಅಂತರ್ಯದ ವಿಲಕ್ಷಣ ಮೃದು ಭಾವದಲ್ಲಿ ಆ ಎಲೆಯನ್ನೆತ್ತಿ ತನ್ನ ಬೆರಳುಗಳ ನಡುವಿಂದ ಹಿಡಿದು ಇನ್ನೊಂದು ಕೈಯ್ಯಿಂದ ಆ ಎಲೆಯ ಮೃದು ಭಾಗವನ್ನು ಮೃದುವಾಗಿ ನೇವರಿಸಿದ. ಬಹುಶಃ ನಜೀಬ್ ಅಲ್ಲಿ ಇರದಿದ್ದರೆ ಆ ಎಲೆಯನ್ನು ಸುಹಾಸಕರ ಭಾವದಿಂದ ತನ್ನ ಕಣ್ಣುಗಳಿಗೆ ಒತ್ತಿಕೊಳ್ಳುತ್ತಿದ್ದನೊ ಏನೊ?

ಕೈ ಚೀಲದ ಜಿಪ್ಪನ್ನು ಮುಚ್ಚದೇ ನಜೀಬನತ್ತ ನೋಡಿದ. ನಜೀಬ ತುಸು ಮಂಪರಿನಲ್ಲಿದ್ದ. ಅದನ್ನು ಗಮನಿಸಿ ಆ ಎಲೆಯನ್ನು ಕೈ ಚೀಲದಲ್ಲಿ ಮಡಿಸಿಟ್ಟು ಅಂಗಿಯ ಮಡಿಕೆಯಲ್ಲಿ ಇರಿಸಿ, ಕೈ ಚೀಲದ ಜಿಪ್ ಮುಚ್ಚಿಬಿಟ್ಟ.

ಕೆಲ ನಿಮಿಷಗಳಲ್ಲಿ ನದಿ ಹಿಂದೆ ಸರಿದಿತ್ತು. ಕೆಲ ಮಕ್ಕಳು ಮರಗಳ ಕೆಳಗೆ ಆಡಿಕೊಂಡ ಕಡೆಯೇ ನೋಡಿದ. ನೋಡುತ್ತಿದ್ದಂತೆಯೇ ಖುರ್ಷೀದನಿಗೆ ಒಮ್ಮೆಗೇ ಸ್ತಬ್ಧಗೊಂಡ ಕಾಲದ ಚಲನೆಯಿಂದಾಗಿ ತಾನೂ ಮಗುವಾಗಿ ಆ ಹುಡುಗರೊಡನೆ ಸೇರಿ ಆಡತೊಡಗಿದಂತೆ ಅನಿಸಿತು. ನಂತರ ಮರಗಳೂ ಹಿಂದಾದವು. ದೂರಗೊಂಡವು. ದೃಷ್ಟಿಯಿಂದ ಮರೆಗೊಂಡವು.

ಗಾಡಿಯ ಕುದುರೆ ಭಾರೀ ಪ್ರಯತ್ನದ ನೆಗೆತಕ್ಕೆ ಮುಂದಾಗಿ ನಾಗಾಲೋಟಕ್ಕೆ ತೊಡಗಿತು ಆಗ. ತಲುಪಬೇಕಾದ ನಿಗದಿತ ಸ್ಥಳವನ್ನು ಎಷ್ಟು ವೇಗವಾಗಿ ತಲುಪಲು ಸಾಧ್ಯವೋ ಅಷ್ಟು ವೇಗದಲ್ಲಿ ಓಡಬೇಕೆಂದು ನಿರ್ಧರಿಸಿದಂತೆ ಹುಚ್ಚು ಓಟದಲ್ಲಿ ಓಡತೊಡಗಿತ್ತು.

●

ಉರ್ದು ಕತೆ

# ಸೇತುವೆ

ಮೂಲ : ಸಾಜಿದ ರಶೀದ

ಅನು : ಭಾಲಚಂದ್ರ ಜಯಶೆಟ್ಟಿ

ಸುತ್ತಲೂ ಏಕಕಾಲಕ್ಕೆ ಇಪ್ಪತ್ತೈದು ಜನ ಕೂಡಬಹುದಾದಂಥ ಕರಿಮರದ ಅಗಲವಾದ ಮಿರುಗುವ ಮೇಜು. ಅವರ ಇನ್ನೊಂದು ಬದಿಗೆ ಬೊಜ್ಜಿನ ಭಾರ ಹೊತ್ತ ಥಳಕು-ಬಳಕಿನ ಐವರಲ್ಲಿ ಒಬ್ಬನು ಕೋಳಿ ಮಾಂಸವನ್ನು ತಿಂದೂ ತಿಂದೂ ಊದಿಸಿಕೊಂಡ ಒಸಡುಗಳಲ್ಲಿ ಅದುಮಿ ಹಿಡಿದಿಟ್ಟಿದ್ದ ಪೈಪಿನಿಂದ ವಿದೇಶಿ ಹೊಗೆಸೊಪ್ಪಿನ ಬಿಳಿ ಹೊಗೆಯನ್ನು ಏರ್‌ಕಂಡಿಶನ್ಡ್ ಹಾಲಿನಲ್ಲಿ ಹರಡುತ್ತ ಜಿಡ್ಡುಗಟ್ಟಿದ ದನಿಯಲ್ಲಿ ತನ್ನ ಎದುರಿಗೆ ಕುಳಿತ ಅಗಲವಾದ ಭುಜಗಳೂ ಮತ್ತು ಕಿರಿದಾದ ಹಣೆಯೂ ಉಳ್ಳಂಥ ವ್ಯಕ್ತಿಯನ್ನು ಸಂಬೋಧಿಸಿ ನುಡಿದ. ಆ ವ್ಯಕ್ತಿ ಮದ್ದು ಗುಂಡು, ಬೆಂಕಿ ಮತ್ತು ರಕ್ತದ ಪಟ್ಟಣದಿಂದ ಕೀಲುಗೊಂಬೆಗಳ ಆಟಿಕೆಗಳ ಪಟ್ಟಣಕ್ಕೆ ಕರೆಸಲ್ಪಟ್ಟವನಾಗಿದ್ದು ರಾತ್ರಿಯಲ್ಲೂ ಕಪ್ಪು ಕನ್ನಡಕವನ್ನು ಧರಿಸಿದ್ದಾನೆ.

`ನೀನು ಇಪ್ಪತ್ತು ಸಾವಿರ ಡಿಮಾಂಡ್ ಮಾಡಿದ್ದೀಯ, ನಾವು ನಿನಗೆ ಇಪ್ಪತ್ತೈದು ಸಾವಿರ ಕೊಡುತ್ತೇವೆ` - ಇಷ್ಟು ಹೇಳಿ ಆತ ತನ್ನ ಉಳಿದ ನಾಲ್ಕು ಜನ ಸಂಗಾತಿಗಳ ಕಡೆಗೆ ದೃಷ್ಟಿ ಬೀರಿದ. ಆ ನಾಲ್ವರೂ ತಮ್ಮ ಹುಬ್ಬುಗಳನ್ನು ಬಾಗಿಸಿ ಒಪ್ಪಿಗೆಯನ್ನು ಸೂಚಿಸಿದರು. ಅವರು ತಾವಾಗಿಯೇ ಐದು ಸಾವಿರ ಹೆಚ್ಚಿಗೆ ಕೊಡುವುದಾಗಿ ಹೇಳಿದಾಗ ಕಪ್ಪು ಕನ್ನಡಕದ ಹಿಂದಿನ `ಆತ`ನ ಎಡಗಣ್ಣು ಅದುರಿತು. `ಬೇಟೆಯ ಮಹತ್ತ್ವವನ್ನು ಅರಿಯದೇನೇ ಮುದುಕಿ ನಾನು ಬಹುಶಃ ಕಡಿಮೆ ಬೆಲೆ ಕಟ್ಟಿದೆ` - ಎಂದು ಆತ ಯೋಚಿಸಿದ. ಬೇಟೆ ನಿರೀಕ್ಷೆಗಿಂತ ಹೆಚ್ಚು ಅಪಾಯಕಾರಿ ಎಂದು ಕಾಣುತ್ತದೆ. ಆದರೆ ಈಗೇನು ಮಾಡಲು ಸಾಧ್ಯವಿದೆ! ಒಂದೇ ಸಲ ಬೆಲೆ ಕಟ್ಟಲಾಗುತ್ತದೆ. ಪಶ್ಚಾತ್ತಾಪದ ಭಾರವನ್ನು ಕಡಿಮೆ ಮಾಡಿಕೊಳ್ಳಲು 'ಆತ' ಪ್ರಯತ್ನಿಸಿದ.

'ಇದೋ, ನಿನ್ನ ಮುಂಗಡದ ಐದು ಸಾವಿರ. ಉಳಿದದ್ದು ಕೆಲಸ ಮುಗಿದ ಮೇಲೆ' - ದಪ್ಪ ಒಸಡಿನ ಅದೇ ವ್ಯಕ್ತಿ ಒಂದು ಕಪ್ಪು ಲಕೋಟೆಯನ್ನು ಮೇಜಿನ ಮೇಲೆ ಆತನ

ಕಡೆಗೆ ತಳ್ಳಿದ. ಸನ್ನೈಕಾದ ಮೇಲೆ ಅದು ಜಾರುತ್ತ ಬಂದು 'ಈತ'ನ ಕೈಗೆ ಅಂಟಿಕೊಂಡಿತು. ಲಕೋಟೆಯನ್ನು ತೆರೆದು 'ಆತ' ಸಮಾಧಾನದಿಂದ ನೋಟುಗಳನ್ನು ಎಣಿಸಿಕೊಂಡು ಜೇಬಿನಲ್ಲಿ ಇಟ್ಟುಕೊಂಡ ಮೇಲೆ ತನ್ನ ಕೆಲಸದ ಆರಂಭದ ಮೊದಲನೆಯ ಮೊಸಬಾದ ಪ್ರಶ್ನೆಯನ್ನು ಕೇಳಿದ :

'ಹೆಸರು?'

'ಬಾಬುಲಾಲ ಘಸಾಳ' - ದಪ್ಪ ಒಸಡಿನವನು ಹಲ್ಲುಗಳನ್ನು ಕಚ್ಚಿ ಏನನ್ನೋ ಅಗಿಯುತ್ತ ಉತ್ತರಿಸಿದ.

'ವಯಸ್ಸು?'

'ಮೂವತ್ತೈದೋ ಮೂವತ್ತೇಳೋ ಇರಬೇಕು' ಇನ್ನು ಮುಂದೆ ಎಣಿಕೆ ಮುಗಿದೇ ಹೋಯಿತು ಎನ್ನುವ ಧಾಟಿಯಲ್ಲಿ ಆತ ಹೇಳಿದ.

'ಎಷ್ಟು ದಿನಗಳಲ್ಲಿ ಕೆಲಸ ಮುಗಿಯಬಹುದು?' - ಉಳಿದ ನಾಲ್ವರಲ್ಲಿ ಒಬ್ಬನು ತನ್ನ ಬೊಜ್ಜು ಮೈಯನ್ನು ಕುರ್ಚಿಯ ಹಿಡಿತದಲ್ಲಿ ಅಲುಗಾಡಿಸುತ್ತ ಕೇಳಿದ.

'ಒಂದು ವಾರ ಬೇಕಾಗಬಹುದು'

'ಒಂದು ವಾರ?' - ಮೂರನೆಯವನು ದುಗುಡದಿಂದ ಕಣ್ಣು ಪಿಳುಕಿಸುತ್ತ ನುಡಿದ.

'ಸರಿ, ಆಗಬಹುದು' - ಮೊದಲನೆಯವನು ತನ್ನ ದಪ್ಪ ಚರ್ಮದ ಬೆರಳಿನಲ್ಲಿಯ ವಜ್ರದ ಉಂಗುರವನ್ನು ತಿರುಗಿಸುತ್ತ ನುಡಿದ. 'ಕೆಲಸ ಬಹಳ ಎಚ್ಚರಿಕೆಯಿಂದ ಮಾಡಬೇಕು, ಆತ ತುಂಬ ಅಪಾಯದ ವ್ಯಕ್ತಿ'

'ಎಂಥ ಸಂದರ್ಭ ಒದಗಿದರೂ ನೀನು ಆತನ ಜೊತೆಗೆ ಮಾತಾಡಲೇ ಕೂಡದು' - ಎರಡನೆಯವನು ಸೂಚಿಸಿದ.

'ಆತನಿಂದ ಎಚ್ಚರವಾಗಿರಬೇಕು' - ಮೂರನೆಯವನು ಹೇಳಿದ.

'ನನಗಿಂತಲೂ ಅಪಾಯಕಾರಿಯೆ?' - ಕಪ್ಪು ಕನ್ನಡಕದ ಹಿಂದೆ ಆತನ ಕಣ್ಣುಗಳು ಆಶ್ಚರ್ಯದಿಂದ ಅರಳಿದವು.

'ನಿನಗಿಂತಲೂ ಎಷ್ಟೋ ಪಾಲು ಹೆಚ್ಚು' - ದಪ್ಪ ಒಸಡಿನವನು ಹಲ್ಲು ಕಚ್ಚಿ ಹೇಳಿದ. 'ಒಂದು ಮಾತು ಗಮನದಲ್ಲಿರಲಿ, ನೀನು ಆತನನ್ನು ಪಿಸ್ತೂಲಿನಿಂದಲ್ಲ,

ಚಾಕುವಿನಿಂದ ಕೊಲ್ಲಬೇಕು. ಆತನ ಸಾವು ಪೊಲೀಸರ ಕಣ್ಣಲ್ಲಿ ಮಹತ್ವದ ವಿಷಯವಾಗಬಾರದು ಎಂಬುದು ನಮ್ಮ ಆಶಯ'

'ನಾವು ಮುಂಗಡ ಕೊಟ್ಟಾಗಿದೆ. ಇನ್ನು ನಿಯತ್ತಿನಿಂದ ಅದನ್ನು ಪೂರ್ಣಗೊಳಿಸುವುದು ನಿನ್ನ ಕರ್ತವ್ಯ'

ಏರ್‌ಕಂಡಿಶನ್ಡ್ ಹಾಲಿನಿಂದ ಹೊರಗಿನ ಆಹ್ಲಾದಕರ ಪರಿಸರಕ್ಕೆ ಬಂದರೂ ವೈಭವೋಪೇತವಾದ ಹಾಲಿನಲ್ಲಿ ಹಬ್ಬಿದ ಓಡೋನಿಲದ ಪರಿಮಳ ಆತನ ಮೂಗಿನ ಹೊರಳೆಯಲ್ಲಿ ಮನೆ ಮಾಡಿಕೊಂಡಿರುತ್ತದೆ. ಪ್ಯಾಂಟಿನ ಜೇಬಿನಲ್ಲಿಯ ಐದು ಸಾವಿರದ ನೋಟುಗಳು ಆತನ ರೋಮ ರೋಮಗಳಲ್ಲಿ ಸ್ಫೂರ್ತಿಯನ್ನೂ ಹೊಸ ಶಕ್ತಿಯ ಅನುಭವವನ್ನೂ ತುಂಬುತ್ತವೆ. ಇಪ್ಪತ್ತು ಸಾವಿರದ ಅರ್ಥವೆಂದರೆ ಕಡೇ ಪಕ್ಷ ವರ್ಷೊಪ್ಪತ್ತಿನ ಐಶಾರಾಮು, ಫಾರಿನ್ ಡ್ರಿಂಕ್ಸು, ಬಾಸಮತಿಯ ಅನ್ನ, ರೋಹೂ ಮೀನಿನ ಸಾರು, ವಿಲ್ಸಕಿಂಗಿನ ಆಹ್ಲಾದಕರ ಹೊಗೆ, ಪ್ರತಿ ವಾರವೂ ರೇಸ್‌ಕೋರ್ಸಿನಲ್ಲಿ ಗೆಳೆಯರ ಕೂಟ, ಸೋನಾಗಾಛಿಯ ತೆಳ್ಳನೆಯ, ಕಪ್ಪನೆಯ, ಕಪ್ಪು ಕೂದಲಿನ ಹುಡುಗಿಯರು, ಹೊತ್ತೇರುವವರೆಗೆ ಮಲಗುವುದು, ಮನಸಿಗೆ ಬಂದಷ್ಟು ಮೀಯುವುದು ಮತ್ತು ಮಲ್ಲಿನ ಜುಬ್ಬ, ಅಂಚು ಇರುವ ಪಂಚೆಯನ್ನು ಕೊಡವಿಕೊಂಡು ರಿಕ್ಷೆಯ ಮೇಲೆ ಅಪ್ಪಟ ಬಂಗಾಲಿ ಬಾಬುವಾಗಿ ಮೆರೆಯಬಹುದು. 'ಆತ' ಯೋಚಿಸುತ್ತಾನೆ. 'ಆತನ' ನರ-ನಾಡಿಗಳಲ್ಲಿ ನಿಧಾನವಾಗಿ ಆನಂದದ ಅನುಭವವು ಪುಟಗೊಳ್ಳುತ್ತಾ ಹೋಗುತ್ತದೆ.

'ಆತ ತುಂಬ ಅಪಾಯದ ವ್ಯಕ್ತಿ.' - ಈ ಮಾತು ಎಡೆಬಿಡದೆ ಆತನ ಬೆನ್ನಟ್ಟುತ್ತದೆ. ಸಹಜವಾಗಿಯೇ ಹಿಪ್‌ಪಾಕೆಟಿನಲ್ಲಿಯ ಚೂರಿಯ ಉಬ್ಬಿನ ಅನುಭವ ಆತನಿಗಾಗುತ್ತದೆ. ಕಪ್ಪು ಕನ್ನಡಕದ ಹಿಂದಿನ ಆತನ ಬಂಜರು ಕಣ್ಣುಗಳಲ್ಲಿ ಕಲ್ಪನೆಗಳು ಮೂಡಿ ಬರುತ್ತವೆ. ಎಷ್ಟು ಅಪಾಯಕಾರಿಯಾಗಿರಬಹುದು ಆತ? ಜೊತೆಯಲ್ಲಿ ಆಯುಧಗಳನ್ನು ಇಟ್ಟುಕೊಂಡಿರುವವನೇ ಆಗಿರಬೇಕು. ನನಗಿಂತಲೂ ಹೆಚ್ಚು ದಾಂಡಿಗನೂ ಶೂರನೂ ಇರಬಹುದೆ? ಎತ್ತರದ, ಉದ್ದನೆಯ, ತೆಳ್ಳನೆಯ, ದಪ್ಪನೆಯ, ವಿಕೃತವೂ ಅಪಾಯಕಾರಿಯೂ ಆದ ಮನುಷ್ಯರ ಅನೇಕ ಬಿಂಬಗಳು 'ಆತ'ನ ಕಣ್ಣೆದುರಿಗೆ ರೂಪುಗೊಳ್ಳುತ್ತಾ ಹೋಗುತ್ತವೆ. ಆತನ ಉತ್ಸಾಹವು ಮರಳುಗಾಡಿನ ಬಾಯಾರಿಕೆಯಾಗುತ್ತ ಹೋಗುತ್ತದೆ.

ಬಾಬುಲಾಲ ಘಸಾಳ ಎಂದು ಹೇಳಲಾದ ವ್ಯಕ್ತಿಯನ್ನು 'ಆತ' ಈಗ ಎರಡು ದಿನಗಳಿಂದ ಹಿಂಬಾಲಿಸುತ್ತಿದ್ದಾನೆ. ತೆಳುವಾದ ಬಡಕಲು ದೇಹ, ಬಾಗಿದ ಭುಜಗಳು, ಮಧ್ಯಮ ಎತ್ತರ, ಆನುವಂಶಿಕವಾಗಿ ಬಂದ ಠೀವಿ, ಹಾವಿನಂಥ ಕಪ್ಪು ಹೊದಿಗೆ, ತೆರೆದ ಮಸ್ತಕ, ದ್ರಾವಿಡ ಬುಡಕಟ್ಟಿನ ಸಾಕ್ಷಿಯನ್ನು ಸಾರಿ ಹೇಳುವ ದಪ್ಪನೆಯ ತುಟಿಗಳು, ಅಗಲವಾದ ಮೂಗು, ಕಾಗೆಯ ಗೂಡಿನಂತೆ ಸಿಕ್ಕುಸಿಕ್ಕಾದ ಒರಟು ಕೂದಲು ಮತ್ತು

ಎರಡೂ ಮಗ್ಗುಲಲ್ಲಿ ಕೂದಲಿನ ಮೇಲೆ ಕಾಣಿಸಿಕೊಳ್ಳುವ ಬಿಳಿ ನರೆಯ ತುಂತುರು - ಈತನೇ ಹತ್ತಿ ಬಟ್ಟೆಯ ವೇಷಧಾರಿಯಾದ ಬಾಬುಲಾಲ ಢಸಾಳ.

'ಈತ' ಎರಡು ದಿನಗಳಿಂದ ಢಸಾಳನ ಹೆಜ್ಜೆಯ ನೆರಳಾಗಿ ಓಡಾಡುತ್ತಿದ್ದಾನೆ. ಢಸಾಳನ ಅಪಾಯಕರವಾದ ವ್ಯಕ್ತಿತ್ವವನ್ನು ತನ್ನ ಅನುಭವದ ಕಣ್ಣುಗಳ ಜರಡಿಯಲ್ಲಿ ಜರಡಿ ಹಿಡಿಯುತ್ತಿದ್ದಾನೆ. ಢಸಾಳನ ಬಾಗಿದ ದುರ್ಬಲ ಹೆಗಲಿಗೆ ನೇತಾಡುತ್ತಿದ್ದ ಖಾದಿಯ ಬಗಲು ಚೀಲ ಎರಡು ದಿನಗಳಿಂದ 'ಆತ'ನಿಗೆ ಒಂದು ಒಗಟಾಗಿ ಪರಿಣಮಿಸಿದೆ. ಅದರಲ್ಲಿ ಖಂಡಿತವಾಗಿಯೂ ರಿವಾಲ್ವರ ಇದ್ದಿರಬೇಕು, ಕೈಬಾಂಬು ಇದ್ದಿರಬೇಕು, ಚಾಕು ಚೂರಿ ಇದ್ದಿರಬೇಕು. ನಿನ್ನೆಯಿಂದ ಈ ಅನುಮಾನ ಆತನ ಕಣ್ಣುಗಳಲ್ಲಿ ಚುಚ್ಚುತ್ತಿದೆ. ಅವಕಾಶ ಸಿಕ್ಕಾಗಲೆಲ್ಲ ತನ್ನ ಅನುಮಾನದ ಪರೀಕ್ಷಣೆಗಾಗಿ 'ಆತ' ತನ್ನ ಕಣ್ಣಾಲಿಗಳ ಸೂಕ್ಷ್ಮ ರಂಧ್ರಗಳ ಮೂಲಕ ಆ ಬಗಲು ಚೀಲದಲ್ಲಿ ಇಣುಕಿ ನೋಡುತ್ತಾನೆ. ದಪ್ಪನೆಯ ಒಂದು ಪುಸ್ತಕ, ಕೆಲವು ಪಾಂಪ್ಲೇಟುಗಳು ಮತ್ತು ಮರಾಠಿಯ ಯಾವುದೋ ಒಂದು ವೃತ್ತ ಪತ್ರಿಕೆ. ಆಯ್ತು, ಇವಿಷ್ಟೆ. ಹಾಗಾದರೆ ಶಸ್ತ್ರಾಸ್ತ್ರಗಳು? ಎತ್ತರದ, ಉದ್ದನೆಯ, ತೆಳ್ಳನೆಯ, ದಪ್ಪನೆಯ, ವಿಕೃತವೂ ಅಪಾಯಕಾರಿಯೂ ಆದ ಮನುಷ್ಯ - ಇವೆಲ್ಲ ಒಟ್ಟಾಗಿ, ಪರಸ್ಪರ ಅಪ್ಪಳಿಸಿ ಗಾಜು-ಗಾಜುಗಳು ಮೊನಚು ಚೂರು-ಚೂರುಗಳಾಗಿ, ಕಲ್ಲು-ಕಲ್ಲುಗಳು ಕಣ-ಕಣಗಳಾಗಿ ಚೆಲ್ಲಿ ಹೋಗುತ್ತವೆ 'ಆತ'ನ ಉತ್ಸಾಹವು ಮರಳುಗಾಡಿನ ಬಾಯಾರಿಕೆಯಾಗಿ ಆಳವಾದ ಜಲಾಶಯಗಳಲ್ಲಿ ಹೂತು ಹೋಗುತ್ತದೆ. ಢಸಾಳ ಆರು ಗಂಟೆಗೆ ಮಿಲ್ಲಿನಿಂದ ಹೊರಟಿದ್ದ. ಪರೇಲಿನ ಸೇತುವೆಯ ಆಚೆ ಬದಿಗಿರುವ ಒಂದು ಸಂಸ್ಥೆಯ ಆಫೀಸಿನಲ್ಲಿ ಹದಿನೈದು ಇಪ್ಪತ್ತು ಜನ ಕ್ಷಯ ರೋಗಿ ಯುವಕರೊಡನೆ ತಾಸೊಪ್ಪತ್ತು ಕುಳಿತಿದ್ದ. ಎಂಟು ಗಂಟೆಗೆ ಅಲ್ಲಿಂದ ತುಸು ದೂರದಲ್ಲಿದ್ದ ಒಂದು ಫ್ರೀ ಕ್ಲಾಸಿಗೆ ಟ್ಯೂಶನ್ ಹೇಳಲು ಹೋಗಿದ್ದ. ಹತ್ತು ಗಂಟೆಗೆ ಫ್ರೀ ಕ್ಲಾಸಿನಿಂದ ಹೊರಟು ಸರಕಾರದಿಂದ ಮಾನ್ಯತೆ ಪಡೆದ ಕಂಟ್ರಿ ಮದ್ಯದಂಗಡಿಯನ್ನು ಹೊಕ್ಕಿದ್ದ. 'ಈತ' ಒಂದು ಲೈಟು ಕಂಬದ ಹಿಂದೆ ನಿಂತು ಪ್ರತೀಕ್ಷೆಯ ಬೇಜಾರನ್ನು ಸಿಗರೇಟಿನ ಹೊಗೆಯಲ್ಲಿ ತೇಲಿಸಿ ಬಿಡುತ್ತಿದ್ದ. ಢಸಾಳ ಎತ್ತರದ ಭವನಗಳನ್ನು, ಕುಬ್ಜವಾದ ಲೈಟು ಕಂಬಗಳನ್ನು, ಜರ್ಜರಿತವಾದ ಚಾಳುಗಳನ್ನು, ಸ್ಲಮ್ಮುಗಳನ್ನು, ಥಳಕು ಬಳಕಿನ ಅಂಗಡಿಗಳನ್ನು, ತುಟ್ಟಿಯಾದ ಹೊಟೇಲುಗಳನ್ನು ಮತ್ತು ಓಣಿ-ಕಿರಿ ರಸ್ತೆಗಳನ್ನು ತೂಕವಾದ ಹೆಜ್ಜೆಗಳನ್ನಿಡುತ್ತ ದಾಟಿ ಪರೇಲ ಸ್ಟೇಶನ್ ತಲುಪಿದ. 'ಈತ' ಢಸಾಳನ ನೆರಳಾಗಿ ಹಿಂಬಾಲಿಸಿದ. ಪರೇಲದಿಂದ ವಕರವಿಲಿ ಮತ್ತು ಢಸಾಳನ ಮನೆಯವರೆಗಿನ ರಸ್ತೆ ಮಣ್ಣಿನ ಮನೆಗಳ ಚಾಳುಗಳ ಮೂಲಕ ಹಾಯ್ದು ಹೋಗುತ್ತದೆ. ಢಸಾಳ ಮುಂದೆ-ಮುಂದೆ, ನೆರಳು ಹಿಂದೆ-ಹಿಂದೆ, ವಕರವಿಲಿ-ನಿಧಾನವಾದ ನಡಿಗೆ, ಈ ಪ್ರದೇಶ-ನಿತ್ಯ ಓಟ-ನಿತ್ಯ ಬಾವಿ ತೋಡಿ ನೀರು ಕುಡಿಯುವವರ ಕಿಡಕಿಗಳ ಸರಳುಗಳಿಗೆ ಅಪ್ಪಿಕೊಂಡ ಹಸಿ ಸೌದೆಯ ದಟ್ಟ ಹೊಗೆ.

ಪ್ಲಾಸ್ಟರ್ ಉದುರುತ್ತಿರುವ ಒಂದು ಕೋಣೆಯ ಬಾಗಿಲನ್ನು ಥಸಾಳ ತಟ್ಟಿದ. 'ಈತ ಇಂಥ ಗುಬ್ಬಚ್ಚಿ ಗೂಡಿನಲ್ಲಿ ವಾಸವಾಗಿದ್ದಾನೆಯೇ?!' ಗರಬಡಿದಂತಾಗಿ 'ಆತ' ಮುನಿಸಿಪಾಲಿಟಿಯ ನಲ್ಲಿಗೆ ಆತುಕೊಂಡು ನಿಂತು ಯೋಚಿಸುತ್ತಾನೆ. ಇಕ್ಕಟ್ಟಾದ ಓಣಿಯ ತಗ್ಗು ಗುಂಡಿಗಳ ಕಚ್ಚಾ ರಸ್ತೆಯ ಮೇಲೆ ಕೊಚ್ಚೆ ತುಂಬಿದೆ. ಕೊಚ್ಚೆ ಮತ್ತು ಉಚ್ಚೆಯ ಆಮ್ಲೀಯ ದುರ್ಗಂಧ ಇಡೀ ವಾತಾವರಣವನ್ನು ವ್ಯಾಪಿಸಿದೆ. ಏರ್‌ಕಂಡಿಶನ್ಡ್ ಹಾಲಿನ ಒಡೊನಿಲದ ಪರಿಮಳ 'ಆತ'ನ ಮೂಗಿನ ಹೊರಳೆಗಳಲ್ಲಿ ಎಲ್ಲೋ ಮಾಯವಾಗಿ ಹೋಗುತ್ತದೆ. ಆಮ್ಲೀಯ ದುರ್ಗಂಧವು ಅದೇಕೋ 'ಆತ'ನಿಗೆ ಪ್ರಿಯವಾಗಿ ಕಾಣ ಹತ್ತುತ್ತದೆ.

ಬಾಗಿಲು ತಟ್ಟಿದಾಗ ಒಬ್ಬ ಬಡಕಲಾದ ಹೆಣ್ಣು ಬಾಗಿಲು ತೆಗೆದಳು. ಆಕೆಯ ಹೆಗಲನ್ನು ಅಪ್ಪಿಕೊಂಡು ಒಂದು ಹೆಣ್ಣು ಮಗು ನಿದ್ದೆ ಹೋಗಿತ್ತು. ಥಸಾಳ ಬಾಗಿ ಮಗುವನ್ನು ಚುಂಬಿಸುತ್ತಾನೆ. ಮಂಪರು ತುಂಬಿದ ಹೆಣ್ಣಿನ ಕಣ್ಣುಗಳಲ್ಲಿ ತೆಳುವಾದ ಕಿರುನಗೆ ಅರಳುತ್ತದೆ. ಕೋಣೆ ಸೇರಿ ಥಸಾಳ ಕಿಡಕಿ ಬಾಗಿಲು ತೆರೆಯುತ್ತಾನೆ. 'ಈತ' ಕಿಡಕಿಯ ಪರದೆಯ ಮೂಲಕ ತಾನೂ ಒಂದು ಪಾತ್ರವಾಗಿದ್ದ ಅದೇ ಕಪ್ಪು-ಬಿಳುಪು ದೃಶ್ಯವನ್ನು ಕಾಣುತ್ತಾನೆ. ನೆಲದ ಮೇಲೆ ಕುಳಿತು ಹೋಂ ವರ್ಕ್ ಮಾಡುತ್ತಿದ್ದ ಆರೇಳು ವರ್ಷದ ಒಬ್ಬ ಹುಡುಗ, 'ಬಾಬಾ ಆಲೇ'. 'ಬಾಬಾ ಆಲೇ' (ಅಪ್ಪ ಬಂದರು, ಅಪ್ಪ ಬಂದರು) ಎಂದು ಕೂಗುತ್ತ ಥಸಾಳನ ಕಾಲುಗಳಿಗೆ ಅಪ್ಪಿಕೊಳ್ಳುತ್ತಾನೆ. ಥಸಾಳನ ಬೆರಳುಗಳ ವಾತ್ಸಲ್ಯದ ಆವೇಗವು ಹುಡುಗನ ಕೂದಲುಗಳಲ್ಲಿ ಜಿನುಗುತ್ತದೆ. ನಲ್ಲಿಯಿಂದ 'ಈತ' ಮಬ್ಬಿನ ಆಳಕ್ಕೆ ಇಳಿಯ ಹತ್ತುತ್ತಾನೆ. ಎತ್ತರವಾದ ಕಟ್ಟಡಗಳ ಮತ್ತು ಬೆತ್ತಲೆ ರಸ್ತೆಗಳ ನಿರ್ಜೀವ ಚೌಕಿನಲ್ಲಿ 'ಆತ' ನಿಧಾನವಾಗಿ ಕರಗುತ್ತ ನಡೆದಿದ್ದಾನೆ-ಕರಗುತ್ತ ನಡೆದಿದ್ದಾನೆ-ಕರಗುತ್ತ-ಕರಗುತ್ತ ಈಗ 'ಆತ'ಆತನಾಗಿಲ್ಲ, ಒಂದು ಮಗುವಾಗಿದ್ದಾನೆ, ಎಳೆ ಮಗುವಾಗಿದ್ದಾನೆ. ಚೌಕಿನ ಎಲ್ಲ ಸಿಗ್ನಲ್‌ಗಳು ತಮ್ಮ ಕಣ್ಣಿನ ಬಣ್ಣ ಬದಲಿಸುತ್ತವೆ. ಕೆಂಪು ಕೆಂಪಾದ ಕಣ್ಣುಗಳಿಂದ 'ಆತ'ನನ್ನು ದುರುಗುಟ್ಟಿ ನೋಡುತ್ತವೆ. 'ಆತ' ಎತ್ತರವಾದ ಕಟ್ಟಡಗಳ ಕಾಡಿನಿಂದ, ಬೆತ್ತಲೆ ರಸ್ತೆಗಳ ಬಲೆಯಿಂದ ಮತ್ತು ಕುಪಿತಗೊಂಡ ಕಣ್ಣುಗಳ ಚೌಕಿನಿಂದ ಭಯಭೀತನಾಗಿ ಕಿರುಚಲು ಸುರುಮಾಡುತ್ತಾನೆ. ಆದರೆ ಯಾವ ಕೈಯೂ 'ಆತ'ನ ತಲೆಗೆ ಕೊಡೆಯಾಗಿ ಬರುವುದಿಲ್ಲ.

'ಅಭ್ಯಾಸ ಝಾಲಾ?' (ಹೋಂ ವರ್ಕ್ ಆಯ್ತೆ?) ತನ್ನ ಮಗನಿಗೆ ಮರಾಠಿಯಲ್ಲಿ ಕೇಳಿದ ಥಸಾಳನ ಪ್ರಶ್ನೆ 'ಆತ'ನಿಗೆ ಆಶ್ಚರ್ಯವನ್ನುಂಟು ಮಾಡುತ್ತದೆ.

'ಆತ್ತಾಚ ಸಂಪಲಾ' (ಇದೇ ಈಗ ಮುಗಿಯಿತು) - ಹುಡುಗ ತುಂಬ ಹುರುಪಿನಿಂದ ಉತ್ತರಿಸುತ್ತಾನೆ.

'ಜ್ವರ ಪರೀಕ್ಷೆ ಮಧ್ಯೇ ಪ್ರಥಮ ಕ್ರಮಾಂಕಾನೆ ಪಾಸ ಝಾಲಾಸ ತ್ವರ ತುಲಾ ಏಕ ಸಾಈಕಿಲ ಬಕ್ಷೀಸ ದೇಈನ' (ನೀನು ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದರೆ ನಾನು ನಿನಗೊಂದು ಸೈಕಲ್ಲು ಬಕ್ಷೀಸಾಗಿ ಕೊಡಿಸುತ್ತೇನೆ). ಹುಡುಗನ ಬೆನ್ನು ಚಪ್ಪರಿಸುತ್ತ ಢಸಾಳನು ನುಡಿಯುತ್ತಾನೆ. ಹಿಂದಿನ ಪರೀಕ್ಷೆಯ ಕಾಲಕ್ಕೂ ಇದೇ ಭಾಷೆಯನ್ನು ಕೇಳಿದ್ದ ಹುಡುಗನು ಈ ಸಲ ಪೂರ್ಣ ನಂಬಿಕೆಯಿಂದ ಅರಳಿ ಹೋಗುತ್ತಾನೆ.

'ಸೀಕ್ರೆಟ್ ಕಾಂಪ್ರಮೈಜಿಗಾಗಿ ನಾವು ಆತನಿಗೆ ಹತ್ತು ಸಾವಿರ ಆಫರ್ ಮಾಡಿದ್ದೆವು, ಬಟ್ ದಟ್ ಬಾಸ್ಟರ್ಡ್ ರೆಫ್ಯೂಜ್ಡ್ ಇಟ್..... ಅಲ್ಲದೆ ಯೂನಿಟಿ, ಕಮ್ಯೂನಿಟಿ, ಬ್ಯಾಕ್‌ವರ್ಡ್‌ಕ್ಲಾಸ್, ಕ್ಲಾಸ್‌ವಾರ್, ಐಡಿಯಾಲಜಿ, ರೆವೆಲ್ಯೂಶನ್ ಅಂತ ಏನೇನೋ ಬೊಗಳಲು ಸುರು ಮಾಡಿದ್ದ' - ಥಳಕು ಬಳಕಿನ ಆ ಐದು ಜನರಲ್ಲಿ ಒಬ್ಬನ ದನಿ ಮೊಳಗಿತು.

ನೆಲದ ಮೇಲೆ ಕುಳಿತು ಊಟ ಮಾಡುತ್ತಿದ್ದ ಢಸಾಳನನ್ನು ನೋಡುತ್ತಾನೆ. ಈಗ ಆತ ಬರಿ ಬನೀನು ಪಾಯಜಾಮಾ ಧರಿಸಿದ್ದಾನೆ. ಆತನ ಬೆತ್ತಲೆ ದೇಹ ಒಣಗಿದ ಮೀನಿನಂತೆ ಕಾಣುತ್ತದೆ. ತಲೆ ಎತ್ತಿ ಓಡಾಡುವಂತೆ ಧೈರ್ಯ ನೀಡುವಂಥ ಅದಾವ ಶಕ್ತಿ ಆ ಒಂದು ಹಿಡಿ ಮೂಳೆಗಳ ಪಂಜರದಲ್ಲಿ ಅಡಗಿರಬಹುದು? ನೂರು ವಾಟ್ಸಿನ ಬಲ್ಬು ಮಿಣುಕು ಮಿಣುಕಾಗಿ ಉರಿಯುತ್ತಿರುವ ತನ್ನ ಕೊಂಪೆಯನ್ನು ಆತ ಖುದ್ದಾಗಿ ನೋಡುತ್ತಿಲ್ಲವೆ? ಪುಸ್ತಕಗಳು ಸೆಲ್ಫಿನಲ್ಲಿಲ್ಲ, ಮೂಲೆಯಲ್ಲಿರುವ ಸ್ಟೂಲಿನ ಮೇಲೆ ಜೋಡಿಸಿ ಇಡಲಾಗಿದೆ. ಅಲ್ಯುಮಿನಿಯಮ್ಮಿನ ಕೆಲವು ಪಾತ್ರೆಗಳು ಮರದ ಹಳೆಯ ಅಲಮಾರಿಯ ಮೇಲೆ ನೇತಾಡುತ್ತಿವೆ. ಮೊಳೆಗೆ ತೂಗು ಹಾಕಿದ ಮೂಟೆಯಲ್ಲಿ ಬಟ್ಟೆಗಳು ತೂರಿಕೊಂಡಿವೆ. ಗೋಡೆ ಪಾಚಿಗಟ್ಟುತ್ತಿದೆ.

'ನಮ್ಮ ಆಫರನ್ನು ತಿರಸ್ಕರಿಸುತ್ತ ಆ ಸೂಳೆಮಗ ಏನಂದಿದ್ದ ಗೊತ್ತೆ! - ಮಿಸ್ಟರ್! ನಾವು ಹಸಿವನ್ನೂ ಕೂಡ ತಪಸ್ಸೆಂದು ಭಾವಿಸುತ್ತೇವೆ - ಎಂದು'

'ತಪಸ್ಸು' - ಆತ ಮುಖ ಸಿಂಡರಿಸಿ ನುಡಿದ, 'ಹಾದರಕ್ಕೆ ಹುಟ್ಟಿದ ಈತನ ಮಗ ಪೇಟೆಯಲ್ಲಿ ಟಾಫಿಗಾಗಿ ಹಟ ಹಿಡಿದಾಗ ಈತನ ಐಡಿಯಾಲಜಿಯ ಬಣ್ಣ ತಾನೇ ತಾನಾಗಿ ಬಯಲಾಗುತ್ತದೆ'.

'ನಾವಂತೂ ಅಹಿಂಸಾವಾದಿಗಳು,' ದಪ್ಪ ಒಸಡಿನವನು ನುಡಿದ, 'ಹಿಂಸೆ ಹರಡಬಾರದು ಎಂಬುದು ನಮ್ಮ ಆಸೆ. ಆದರೆ ಈತ ಭಂಗಿ ಕ್ಲಾಸ್‌ವಾರ್ ಮತ್ತು ಯೂನಿಟಿಯ ತಮಟೆ ಬಾರಿಸುತ್ತ ಗೋಳಿಬಾರಿಗೆ ಆಸ್ಪದ ಕೊಡುತ್ತಾನೆ. ಪಾಪ, ಆ ಜನ ರೊಟ್ಟಿ ಚಟ್ನಿಯಲ್ಲೇ ಸಂತೃಪ್ತರಾಗಿದ್ದಾರೆ'

'ಆದರೆ ಈತನು ಮಾತ್ರ ರೆವೆಲ್ಯೂಶನ್ನಿನ ಕುಮ್ಮಕ್ಕು ಕೊಟ್ಟು ಅವರ ತಲೆಯನ್ನೂ ಕೆಡಿಸುತ್ತಿದ್ದಾನೆ, ಈ ಕುಲಗೆಟ್ಟವರು ಒಂದೆರಡು ಪುಸ್ತಕಗಳನ್ನು ಓದಿಕೊಂಡದ್ದೇನು, ತಮ್ಮನ್ನು ತಾವು ಎಕ್ಸ್ಟ್ರಾ ಆರ್ಡಿನರಿ ಇಂಟೆಲೆಕ್ಚುಅಲ್ ಎಂದು ತಿಳಿಯ ಹತ್ತಿದ್ದಾರೆ, ಇದೇ ನಾಲ್ಕಾರು ಜನ ಇಡೀ ಪಟ್ಟಿಯ ಜನರ ತಲೆ ಕೆಡಿಸಿ ಬಿಟ್ಟಿದ್ದಾರೆ. ಹೇಲು ತಿನ್ನುವವರಿಗೆ ಮೋತಿ ಚೂರ್ ತಿನ್ನಲು ಬಂಡೇಳಿಸುತ್ತಿದ್ದಾನೆ. ಅರೆ... ಆ ಹರಾಮಖೋರ ಲಂಗೋಟಿಯ ಮುದುಕನಂತೂ ಇವರ ತಲೆ ಪೂರಾ ತಿರುಗಿಸಿ ಸತ್ತು ಹೋದ. ಈಗ ಇಡೀ ದೇಶ ಈ ಸರಕಾರಿ ಬ್ರಾಹ್ಮಣರನ್ನು ಹೆಗಲ ಮೇಲೆ ಹೊತ್ತುಕೊಂಡು ಮೆರವಾಡಬೇಕಾಗಿದೆ'

'ಆತ' ತಲೆಯನ್ನು ಕೊಡವಿ ಧಸಾಳನ ಒಂದು ಹಿಡಿ ಅಸ್ತಿತ್ವಕ್ಕೆ ತನ್ನ ಕಣ್ಣಿನ ಟೆಲಿಸ್ಕೋಪಿನ ಮೂಲಕ ಗುರಿ ಸಾಧಿಸಿದ. ಕ್ರಾಸ್‌ಪಾಯಿಂಟು ಎದೆ ಮತ್ತು ಹೊಟ್ಟೆಯ ಮೇಲೆಯೇ ಓಡಾಡುತ್ತಿತ್ತು. ಹಿಪ್‌ಪಾಕೆಟಿನಲ್ಲಿ ಇಟ್ಟಿದ್ದ ಚೂರಿಯ ಮೇಲೆ ಕೈಯಾಡಿಸುತ್ತ 'ಆತ' ಲೆಕ್ಕ ಹಾಕಿದ - ಒಂದೇ ಒಂದು ಇರಿತ ಸಾಕು, ಮರುಗಳಿಗೆಯಲ್ಲೇ: ಆತ 'ರಾಮನಾಮ ಸತ್ಯ'ವಾಗಿ ಬಿಡುತ್ತಾನೆ.

ಆಹ್ಹಾಹ್ಹಾಹ್ಹಾಹ್ಹೂಹ್ಹೂ.... ಧಸಾಳನ ಕೇಕೆ 'ಆತ'ನನ್ನು ತತ್ತರಿಸಿ ಬಿಡುತ್ತದೆ. ತನ್ನ ಮಗನ ಜೊತೆ ಕುಳಿತು ಧಸಾಳ ಮಾತಾಡುತಿದ್ದಾನೆ ಮಾತು ಮಾತಿಗೂ ಅಟ್ಟಹಾಸದಿಂದ ನಗುತ್ತಿದ್ದಾನೆ. ಒಂದು ಹಿಡಿ ಮೂಳೆಯ ಆತನ ದೇಹ ಕಂಪಿಸುತ್ತದೆ.

'ಆತ ತುಂಬ ಅಪಾಯದ ವ್ಯಕ್ತಿ'

ತನಗೆ ಐದು ಸಾವಿರ ಹೆಚ್ಚಿಗೆ ಕೊಡಬೇಕಾದರೆ ಹಿಡಿಯಷ್ಟಿರುವ ಈ ಮನುಷ್ಯ ಅಷ್ಟೊಂದು ಅಪಾಯಕಾರಿ ಹೇಗಾಗಬಲ್ಲನು? ಆತ ತನ್ನ ಜೊತೆಗೆ ಎಂಥ ಅಪಾಯವನ್ನು ಹೊತ್ತುಕೊಂಡು ಅಡ್ಡಾಡುತ್ತಿದ್ದಾನೆ? 'ಈತ' ತನ್ನ ಕಲ್ಪನೆಯಲ್ಲಿ ಧಸಾಳನ ಒಂದೊಂದೇ ಅಂಗವನ್ನು ತಟ್ಟಿ ತಟ್ಟಿ ನೋಡುತ್ತಾನೆ. ಬರಗಾಲ ಪೀಡಿತ ಪ್ರದೇಶದ ಜಾಹಿರಾತಿನಂತೆ 'ಆತ'ನಿಗೆ ಧಸಾಳನ ವ್ಯಕ್ತಿತ್ವವು ತುಂಬ ಕರುಣಾಜನಕವಾಗಿ ಕಾಣುತ್ತದೆ. ಆ ಐವರು ತಮ್ಮ ಬೇಟೆಯನ್ನಾಗಿ ಮಾಡಿಕೊಂಡಿರುವ ಈ ವ್ಯಕ್ತಿತ್ವದ ಧಸಾಳನ ಇಡೀ ದಿನದ ಓಡಾಟದ ಖಂಡತುಂಡಗಳನ್ನೆಲ್ಲ ಜೋಡಿಸಿ ಆತನ ಹೆಣದೋಪಾದಿಯ ಅಸ್ತಿತ್ವದ ಭೀಷಣತೆಯನ್ನು ಅನುಭವಕ್ಕೆ ತಂದುಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಯಾವುದೇ ಸ್ಪಷ್ಟ ಚಿತ್ರ ರೂಪುಗೊಳ್ಳುವುದಿಲ್ಲ. ಆಗ ತನ್ನ ಕವಡಿದ ಮನಸ್ಸು ಹಾಗೂ ದಣಿದ ದೇಹದ ಭಾರ ಹೊತ್ತ ಹೆಜ್ಜೆಗಳನ್ನು ಹಾಕುತ್ತ ಇಕ್ಕಟ್ಟಾದ ಓಣಿಯಲ್ಲಿ ಸೋಲಿನ ದಣಿವಿನಿಂದ ತಡಬಡಿಸುತ್ತ ಕತ್ತಲೆಯಲ್ಲಿ ಬೆರೆತು ಹೋಗುತ್ತಾನೆ.

ಹೊಟೇಲಿನ ಕೋಣೆಯ ನೀರವತೆ 'ಆತ'ನ ನರನಾಡಿಗಳಲ್ಲಿ ಭಣಗುಡುತ್ತಿದೆ. ಅರ್ಧ ಬಾಟಲಿಯ ನಶೆಯು ತಲೆಯಲ್ಲಿ ಗೊಂದಲವನೆಬ್ಬಿಸಿದ ವಿಚಾರಗಳೊಂದಿಗೆ ಅಪ್ಪಳಿಸಿ

ಚೂರುಚೂರಾಗಿ ಹೋಗಿದೆ. ಸಿಗರೇಟಿನ ಸುಟ್ಟ ತುಂಡುಗಳಿಂದ ಆಶ್‌ಟ್ರೇ ತುಂಬಿ ಹೋಗಿದೆ. ಮತ್ತು ಜೇಬಿನಲ್ಲಿರುವ ಐದು ಸಾವಿರದ ನೋಟುಗಳು ಮುಂಬರುವ ಕ್ಷಣಗಳ ಲೆಕ್ಕವನ್ನು ಒಪ್ಪಿಸುತ್ತವೆ. ಹಿಪ್‌ಪಾಕೇಟಿನ ಚೂರಿಯ ಭಾರ ಢಸಾಳನ ಭಾರಕ್ಕಿಂತ ಅಧಿಕವಾಗಿ ಭಾಸವಾಗುತ್ತದೆ. ಒಬ್ಬ ಬರಿಗೈಯವನನ್ನು ಕೊಲ್ಲುವುದಕ್ಕಾಗಿ ಇಷ್ಟೊಂದು ಸುರಕ್ಷಾ ಕ್ರಮಗಳನ್ನು ಕೈಗೊಳ್ಳುವ ಅವಶ್ಯಕತೆಯಾದರೂ ಏನಿದೆ?

ಎಲ್ಲಿಯೋ, ಯಾವುದೋ ಓಣಿಯ, ಯಾವುದೋ ಕತ್ತಲೆಯ ತಿರುವಿನಲ್ಲಿ ಚೂರಿಯ ಒಂದು ಸಣ್ಣ ಇರಿತವೇ ಸಾಕು, ಮತ್ತೆ......

ಆದರೆ ಯಾಕೆ?

ಇಪ್ಪತ್ತೈದು ಸಾವಿರ, ಸಾವಿರ, ಸಾವಿರ, ಸಾವಿರ......

ಒಬ್ಬ ದುರ್ಬಲನೂ, ಶಸ್ತ್ರಹೀನನೂ ಆದ ಮನುಷ್ಯನಿಂದ ಈ ಜನ ಇಷ್ಟೇಕೆ ಭಯಭೀತರಾಗಿದ್ದಾರೆ?

ದೈಹಿಕ ಮತ್ತು ಆರ್ಥಿಕ ಬಲದಲ್ಲಿಯಂತೂ ಅವರು ಈತನಿಗಿಂತ ಎಷ್ಟೋ ಪಾಲು ಶಕ್ತಿಶಾಲಿಗಳಾಗಿದ್ದಾರೆ.

ಅವರಿಗೆ ಅದೆಂಥ ಅಪಾಯವಿದೆ?

ಈ ಮುಂಚೆ ನನಗೆ ಬೇಟೆಯಾದವರೆಲ್ಲ ನನಗಿಂತ ದೊಡ್ಡ ಕೊಲೆಗಡುಕರೂ, ನನಗಿಂತ ಅಧಿಕ ಶೈತಾನರೂ, ನನಗಿಂತ ಹೆಚ್ಚು ಶಕ್ತಿಶಾಲಿಗಳೂ ಆಗಿದ್ದರು. ಆದರೆ ಈತ...... ಈತ ಏನಾಗಿದ್ದಾನೆ?

ಕೊಲೆಗಡುಕನೆ?<br>
ಸ್ಮಗಲರ್‌ನೆ?<br>
ಬ್ಲ್ಯಾಕ್ ಮಾರ್ಕೆಟಿಯರ್‌ನೆ?<br>
ವ್ಯಭಿಚಾರಿಯೆ?<br>
ಕಳ್ಳನೆ?<br>
ಬದ್ಮಾಶನೆ?<br>
ದೇಶದ್ರೋಹಿಯೆ?<br>
ರಾಷ್ಟ್ರದ್ರೋಹಿಯೆ?<br>
ಸಮಾಜದ ಶತ್ರುವೆ?

ಯಾವುದಕ್ಕೂ ಉತ್ತರವಿಲ್ಲ. ಅಪರಾಧದಿಂದ ಕೂಡಿದ ನೀರವತೆ ಮಾತ್ರ ವ್ಯಾಪಿಸಿದೆ, ಸುತ್ತಲು.

ನಾನು ನನ್ನ ಬೇಟೆಯನ್ನು ಬಿಟ್ಟು ಬೇರೆ ಇನ್ನಾರೋ ತಪ್ಪು ಮನುಷ್ಯನನ್ನು ಬೆನ್ನಟ್ಟುತ್ತಿಲ್ಲ ತಾನೆ?

ಇಲ್ಲ, ಬೇಟೆ ಇದೇ ಆಗಿದೆ.

ಆದರೆ ಅವರು ಆರಿಸಿರುವಂಥ ಬೇಟೆ ತಪ್ಪಾಗಿದೆಯೆ?

ಮೌನವೇ ಉತ್ತರ. ಸುಮ್ಮನಿರುವುದು ಸ್ಥಿರತೆಯ ಸಂಕೇತ.

ಮರುದಿನ ಮುಂಜಾನೆ 'ಆತ' ಧಸಾಳನ ಜೊತೆಗೆ ಲೋಕಲ್ ಟ್ರೇನ್ ಹತ್ತಿದ. ಧಸಾಳನಿಗೆ ಕೂಡಲು ಜಾಗ ಸಿಕ್ಕಿತು, 'ಆತ' ನಿಂತುಕೊಂಡೇ ಇದ್ದ. ತನ್ನ ಬೆಂಚಿನ ಮೇಲೆ ಕುಳಿತ ಜನರನ್ನು ಒತ್ತರಿಸಿ ಧಸಾಳ 'ಆತ'ನನ್ನು ಕರೆದು ಕೂಡಲು ಸನ್ನೆ ಮಾಡಿದ. ನಿರಾಕರಿಸಬೇಕೆಂದು 'ಆತ'ನಿಗೆ ಮನಸಾಯಿತು. ಆದರೆ 'ಆತ' ತನ್ನ ಕನ್ನಡಕದ ಕಪ್ಪು ಗಾಜುಗಳ ಹಿಂದಿನಿಂದ ಧಸಾಳನ ದಪ್ಪ ಗಾಜಿನ ಕನ್ನಡಕದ ಹಿಂದೆ ಇಣುಕುತ್ತಿದ್ದ ಕಣ್ಣುಗಳನ್ನು ನೋಡಿದ; ಅವುಗಳಲ್ಲಿ ಶತಮಾನದಿಂದ ಅನುಭವಿಸಿದ ಅತ್ಯಾಚಾರವಾಗಲೀ ಪರಾಧೀನತೆಯಾಗಲೀ ಇರಲಿಲ್ಲ, ಆದೇಶವಿತ್ತು..... ಆದೇಶ! ತನ್ನ ಕಪ್ಪು ಕನ್ನಡಕವನ್ನು ಸಮತೂಕದಲ್ಲಿ ಇಟ್ಟುಕೊಳ್ಳುತ್ತ 'ಆತ' ಧಸಾಳನ ಪಕ್ಕದಲ್ಲಿ ಕುಳಿತ.

'ಧನ್ಯವಾದ' - ಮೇಲೆ ನುಗ್ಗಿ ಬರುವವರ ಬಾಯಿಂದ ಬರುವ ಉಪಚಾರದ ಸೌಜನ್ಯದ ಕ್ಯಾಸೆಟ್ಟು ಆತ ಹಾಕಿದ.

'ಇಂಥ ಸಣ್ಣ ವಿಷಯಗಳಿಗೆಲ್ಲ ಧನ್ಯವಾದ ಹೇಳುವ ಅವಶ್ಯಕತೆ ಏನೂ ಇಲ್ಲ.' ಧಸಾಳ ಮೇಣವಾಗಿ ಆತನ ಕಣ್ಣುಗಳಲ್ಲಿ ಇಳಿಯುತ್ತ ಹೇಳಿದ.

'ಎಂಥ ಸಂದರ್ಭ ಒದಗಿದರೂ ನೀನು ಆತನ ಜೊತೆಗೆ ಮಾತಾಡಲೇ ಕೂಡದು'

'ತಾವು ಹಾಗೇಕೆ ಭಾವಿಸುತ್ತೀರಿ?' - ಇಷ್ಟವಿಲ್ಲದೆಯೂ ಧಸಾಳನ ಮಾತುಗಳು 'ಆತ'ನ ಬಾಯಿ ಬಿಡಿಸುತ್ತವೆ.

'ಯಾಕೆಂದರೆ ಒಬ್ಬರ ಸಹಯೋಗವನ್ನು ನಾವು ಒಂದು ಉಪಕಾರವಾಗಿ ಭಾವಿಸುತ್ತಿದ್ದೇವೆ ಎಂಬುದು ಧನ್ಯವಾದದ ಅರ್ಥ. ಆದರೆ ವಾಸ್ತವವಾಗಿ ಯಾರೂ ಯಾರ ಮೇಲೆಯೂ ಉಪಕಾರ ಮಾಡುವುದಿಲ್ಲ. ಯಾಕೆಂದರೆ ನೈತಿಕವಾಗಿ ಪರಸ್ಪರರ ಬಗ್ಗೆ ನಮ್ಮ ಕೆಲವು ಕರ್ತವ್ಯಗಳಿವೆ. ತಮಗಾಗಿ ನನ್ನ ಕೆಲವು ಕರ್ತವ್ಯಗಳಿರಬಹುದು ಮತ್ತು ನನಗಾಗಿ ತಮ್ಮ.....'

‘ನಾನು ಮುಂಗಡ ಕೊಟ್ಟಾಗಿದೆ. ಇನ್ನು, ನಿಯತ್ತಿನಿಂದ ಅದನ್ನು ಪೂರ್ಣ ಗೊಳಿಸುವುದು ನಿನ್ನ ಕರ್ತವ್ಯ’

‘ತಾವು ಯಾವ ಕೆಲಸದಲ್ಲಿದ್ದೀರಿ?’ - ಇಷ್ಟವಿಲ್ಲದಿದ್ದರೂ ಕೇಳಿಬಿಡುತ್ತಾನೆ.

‘ಆತ ತುಂಬ ಅಪಾಯದ ವ್ಯಕ್ತಿ’

‘ಎಂಥ ಸಂದರ್ಭ ಒದಗಿದರೂ ನೀನು ಆತನ ಜೊತೆಗೆ ಮಾತಾಡಲೇಕೂಡದು’

‘ಒಂದು ಜವಳಿ ಮಿಲ್ಲಿನಲ್ಲಿ ಡಿಪಾರ್ಟ್‌ಮೆಂಟ್ ಸೂಪರ್‌ವೈಸರ್ ಆಗಿದ್ದೇನೆ’

‘ಮತ್ತೆ ತಮ್ಮ ಹವ್ಯಾಸ?’ - ‘ಆತ’ನಿಗೆ ಕೆದಕುವ ಮನಸ್ಸಾಗುತ್ತದೆ.

‘ರಾಜಕೀಯದಲ್ಲಿ ಆಸಕ್ತಿ ಇದೆ. ನಮ್ಮ ವರ್ಗದ ಜನರನ್ನು ಸಂಘಟಿಸುವುದು, ಹೊಟ್ಟೆಯ ಜೊತೆಗೆ ಎರಡು ಕೈಗಳೂ ಇವೆ ಎಂಬ ಜಾಗೃತಿಯನ್ನು ಅವರಲ್ಲಿ ಮೂಡಿಸುವುದು. ಬೇರೆಯವರಲ್ಲಿ ಇರುವಷ್ಟೇ ಬುದ್ಧಿಶಕ್ತಿ ಅವರ ತಲೆ ಬುರುಡೆಯಲ್ಲಿಯೂ ಇದೆ ಎಂಬ ಅರಿವನ್ನು ಅವರಲ್ಲಿ ನಾನು ಮೂಡಿಸಲು ಬಯಸುತ್ತೇನೆ. ಯಾವ ದಿನ ಅವರಲ್ಲಿ ಈ ಅರಿವು ಮೂಡುವುದೋ ಆ ದಿನ....’ ‘ಆತ’ನ ಕಾಲ್ಕೆಳಗೆ ವೇಗವಾಗಿ ಧೂಳೆಬ್ಬಿಸುತ್ತ ಚಕ್ರಗಳು ಹಳಿ ಬದಲಾಯಿಸುತ್ತವೆ, ಕಿಡಿಗಳು ಹಾರುತ್ತವೆ. ಘಡಘುಡದ ಗದ್ದಲವು ಢಸಾಳನ ಉಳಿದ ವಾಕ್ಯವನ್ನು ಹಾರಿಸಿಕೊಂಡು ಹೋಗುತ್ತವೆ.

‘ಒಂದು ಪರ್ಸನಲ್ ಕ್ವೆಶ್ಚನ್ ಇದೆ’ - ಕಪ್ಪು ಕನ್ನಡಕದ ಮೂಲಕ ‘ಆತ’ ಢಸಾಳನ ಕಣ್ಣುಗಳಲ್ಲಿ ಹಣಿಕಿಕ್ಕುತ್ತಾನೆ.

‘ಕೇಳಿ, ಕೇಳಿ - ಇಂದಿನ ಮನುಷ್ಯನ ಯಾವ ವಿಷಯವೂ ಪರ್ಸನಲ್ ಆಗಿ ಉಳಿದಿಲ್ಲ. ಜನಸಂಖ್ಯೆ ಎಷ್ಟೊಂದು ಬೆಳೆದಿದೆ ಎಂದರೆ ಈಗ ಸರಕಾರವೂ ಕೂಡ ನಮ್ಮ ಫ್ಯಾಮಿಲಿ ಮ್ಯಾಟರ್‌ಗಳಲ್ಲಿ ಆಸಕ್ತಿ ವಹಿಸುತ್ತಿದೆ’

‘ಸಂಬಳ ಬಿಟ್ಟು ಇತರೆ ಕೆಲಸಗಳಲ್ಲಿ ತಮಗೆ ಎಷ್ಟು ಸಂಪಾದನೆಯಾಗುತ್ತದೆ?’

‘ಎಷ್ಟೂ ಇಲ್ಲ’

ಇದು ‘ಆತ’ನಿಗೆ ಆಶ್ಚರ್ಯದ ಸಂಗತಿಯೇ ಆಗಿತ್ತು.

ಇಕ್ಕಟ್ಟಾದ ಯಾವುದೊ ಒಂದು ಓಣಿಯಲ್ಲಿ ಗುಬ್ಬಚ್ಚಿ ಗೂಡಿನಂಥ ಒಂದು ಮನೆ, ಅದೇ ಆತನ ಮನೆ! ನನ್ನ ಮನೆ, ಆತನ ಮನೆ - ಎಷ್ಟೊಂದು ವ್ಯತ್ಯಾಸ!

ಬಡಕಲಾದ ಹೆಂಡತಿ

ಎರಡು ಮಕ್ಕಳು

ಬೆತ್ತಲೆ ಗೋಡೆಗಳು

ಉದುರಿ ಹೋಗುತ್ತಿರುವ ಪ್ಲಾಸ್ಟರ್

ಇನ್ನೂ ಏನೇನೋ ಆತನ ಕಣ್ಣುಗಳಲ್ಲಿ ಚೌಚೌ ಆಗುತ್ತ ಹೋಯಿತು.

'ಹಾಗಾದರೆ, ನೀವೇಕೆ ಇಷ್ಟೊಂದು ಜಂಜಡಗಳನ್ನು ಕಟ್ಟಿಕೊಂಡಿದ್ದೀರಿ?' - ಆಶ್ಚರ್ಯದಿಂದ 'ಆತ' ನುಡಿಯುತ್ತಾನೆ.

'ಜಂಜಡ!! ಹ್ಹಾ ಹ್ಹಾ ಹ್ಹಾ' - ಢಸಾಳ ನಗುತ್ತಾನೆ. 'ನನ್ನ ಹೆಂಡತಿಯೂ ಕೂಡ ಇದೇ ಮಾತನ್ನು ಕೇಳುತ್ತಾಳೆ. ಆದರೆ, ಗೆಳೆಯ, ಹಣಕಾಸು ನಮ್ಮ ಯಾವ ಪರಿಶ್ರಮದ ಸಂಭಾವನೆಯೂ ಆಗಲಾರದು. ಅಲ್ಲದೇ ಕೆಲವು ಕೆಲಸಗಳನ್ನು ನಾವು ಮಾಡಲೇ ಬೇಕಾಗಿದೆ. ಕೆಲವನ್ನು ನಿಮಗೂ ಮಾಡಬೇಕಾಗಿರಬಹುದು'

'ಕೆಲಸ ಬಹಳ ಎಚ್ಚರಿಕೆಯಿಂದ ಮಾಡಬೇಕು'

ಢಸಾಳ ಹೇಳುತ್ತ ಹೋದ. 'ಆತ' ಕಣ್ಣಿನಿಂದ ಕೇಳುತ್ತ ಹೋದ.

'ಯೂನಿಟಿ, ಕಮ್ಯೂನಿಟಿ, ಬ್ಯಾಕ್‌ವರ್ಡ್ ಕ್ಲಾಸ್, ಕ್ಲಾಸ್ ವಾರ್, ಐಡಿಯಾಲಜಿ, ರೆವಲ್ಯೂಶನ್ ಅಂತ ಏನೇನೋ ಬೊಗಳಲು ಸುರುಮಾಡಿದ್ದ ಆತ'

ಢಸಾಳನ ಮಾತು ಮುಂದುವರಿದಿತ್ತು. 'ಆತ' ಕಪ್ಪು ಕನ್ನಡಕದ ಹಿಂದಿನಿಂದ ಫ್ಯಾನಿನ ಜಾಲರಿಯ ಮೇಲೆ ಕುಳಿತು ನಳನಳಿಸುತ್ತಿದ್ದ ಬಣ್ಣದ ರೆಕ್ಕೆಗಳ ಒಂದು ಪುಟ್ಟ ಗುಬ್ಬಚ್ಚಿಯನ್ನು ದಿಟ್ಟಿಸುತ್ತಿದ್ದ. ಯಾವುದೋ ಸ್ಟೇಶನ್ನಿನಲ್ಲಿ ಅದು ಒಳಗೆ ಸೇರಿಕೊಂಡಿರಬೇಕು. ಕಪ್ಪು ಕನ್ನಡಕವನ್ನು ತೆಗೆದು ತನ್ನ ಮರಗಟ್ಟಿದ ಕಣ್ಣುಗಳಲ್ಲಿ ಪುಟ್ಟ ಗುಬ್ಬಚ್ಚಿಯ ರೆಕ್ಕೆಗಳ ಬಣ್ಣಗಳನ್ನು ತುಂಬಿಕೊಳ್ಳಬೇಕೆಂಬ ಆಸೆ ಇದ್ದಕ್ಕಿದ್ದ ಹಾಗೆ 'ಆತ'ನ ಮನಸ್ಸಿನಲ್ಲಿ ಮೂಡಿತು.

'ಬಹುಶಃ ನೀವು ಬಂಗಾಲಿಗಳೆ?' - ಢಸಾಳ ತನ್ನ ಮಾತಿಗೆ ತಾನೇ ಆಶ್ಚರ್ಯಪಟ್ಟು ಕೇಳಿದ. ಆತನಿಗೆ ಕರೆಂಟು ಮುಟ್ಟಿದಂಥ ಅನುಭವವಾಯ್ತು.

'ಹ್ಞಾಂ, ಆಮೀ ಬಂಗಾಲಿ' - ಆತನಿಂದ ಇಷ್ಟೇ ಉತ್ತರ ಹೇಳಲು ಸಾಧ್ಯವಾಯ್ತು.

'ಮುಂಬೈ ಸುತ್ತಾಡಲು ಬಂದಿದ್ದೀರಾ?'

ತಾನು ಮೂರ್ತೀಭವಿಸಿದ ಒಕ್ಕಣ್ಣನಾಗಿದ್ದೇನೆ ಎಂದು 'ಆತ'ನಿಗೆ ಭಾಸವಾಯ್ತು. ಏನೆಂದು ಉತ್ತರ ಕೊಡಬೇಕು? ಹೌದು, ಸುತ್ತಾಡಲು ಬಂದಿದ್ದೇನೆ ಎಂದೋ ಅಥವಾ ಬದ್ಮಾ ಮಗನೆ! ನಿನ್ನನ್ನು ಸುತ್ತಾಡಿಸಲು ಎಂದು ಹೇಳಬೇಕೋ!

'ಹ್ಞಾಂ' - ಬಲವಾಗಿ ತಲೆಯನ್ನು ಮಾತ್ರ ಅಲ್ಲಾಡಿಸಿ 'ಆತ' ಸುಮ್ಮನಾಗುತ್ತಾನೆ.

'ಕಲಕತ್ತಾ ನನಗೆ ತುಂಬ ಪ್ರಿಯವಾಗಿದೆ' - ಢಸಾಳನು ಆತನ ಕಣ್ಣುಗಳಲ್ಲಿ ಇಳಿಯುತ್ತಾನೆ.

'ತಾವು ಕಲಕತ್ತಾಕ್ಕೆ ಹೋಗಿದ್ದಿರಾ?' - ದನಿ ನಡುಗುತ್ತದೆ.

'ಇಲ್ಲ, ಆದರೆ ನಿಮ್ಮಂಥ ಪ್ರಾಮಾಣಿಕ ವ್ಯಕ್ತಿಗಳನ್ನು ಭೇಟಿ ಮಾಡಿದ ಮೇಲೆ ನನಗೆ ಕಲಕತ್ತಾ ಪ್ರಿಯವಾಗಿ ಕಂಡಿತು. ಈಗ ಇಲ್ಲಿಯದನ್ನೇ ನೋಡಿ, ಮುಂಬೈ ಎಷ್ಟೊಂದು ಫಾಸ್ಟ್ ಸಿಟಿ ಇದೆ ಎಂದು ಜನ ಆಡಿಕೊಳ್ಳುತ್ತಾರೆ. ಮುಂಬೈ ಸ್ವತಃ ಓಡುತ್ತಿದೆಯಾ?.... ಇಲ್ಲ..... ಇಲ್ಲಿಯ ಜನ ಫಾಸ್ಟ್ ಆಗಿದ್ದಾರೆ. ಇಲ್ಲಿಯ ಬದುಕು ಫಾಸ್ಟ್ ಆಗಿದೆ. ಇದೇ ರೀತಿಯಾಗಿ ಕಲಕತ್ತಾ ತುಂಬ ಚೆನ್ನಾಗಿದೆ' - ಎಂದು ಹೇಳಿ ಢಸಾಳ ನಗಹತ್ತುತ್ತಾನೆ.

'ಆತ ತುಂಬ ಅಪಾಯದ ವ್ಯಕ್ತಿ....'

ರೈಲು ಓಡುತ್ತಿದೆ. ಢಸಾಳನ ಮಾತುಗಳೂ ಮುಂದುವರೆದಿವೆ. ಚಕ್ರಗಳ ಕೆಳಗೆ ಸಣ್ಣ-ಪುಟ್ಟ ಸೇತುವೆಗಳು ಗತಿಸಿ ಹೋಗುತ್ತವೆ. ಫ್ಯಾನಿನ ಜಾಲರಿಯ ಮೇಲೆ ಬಣ್ಣದ ರೆಕ್ಕೆಗಳ ಪುಟ್ಟ ಗುಬ್ಬಚ್ಚಿ ನಳನಳಿಸುತ್ತಿದೆ.

'ನನಗೆ ಬಂಗಾಲಿ ಕವಿತೆ ತುಂಬ ಇಷ್ಟ' - ಢಸಾಳನ ಮಾತುಗಳನ್ನು 'ಆತ' ತುಂಡು ತುಂಡಾಗಿ ಕೇಳಿಸಿಕೊಳ್ಳುತ್ತಿದ್ದಾನೆ. 'ಶಾಂತಿನಿಕೇತನದ ಮುದಿ ಗಿಡಗಳ ನೆರಳಿನಲ್ಲಿ ತಂಪಾದ ಹಸಿರು ಹಾಸಿನ ಮೇಲೆ ಮಲಗಿ ತನ್ನನ್ನೇ ತಾನು ಮರೆತು ಬಿಡಬೇಕೆಂದು ನನಗೆ ಆಸೆಯಾಗುತ್ತದೆ.'

'ಚೌಕಿನಲ್ಲಿ ಸಿಗುವ ರಸಗುಲ್ಲಾಗಳು ಆದರೆ ಸಾಕು, ಬೇರೆ ಇನ್ನೇನು ಬೇಕು?'

'ಹಾವಡಾದ ಚಿತ್ರವನ್ನು ನೋಡಿದಾಗ ಒಂದು ದಿನ ಅದರ ಸೇತುವೆಯ ಕೆಳಗೆ ಹರಿವ ತಂಪು ನೀರಿನಲ್ಲಿ ಮುಳುಗು ಹಾಕಬೇಕೆಂದು ಮನಸ್ಸಾಗುತ್ತದೆ?'

ಢಸಾಳನ ಮಾತುಗಳಲ್ಲಿ ಮದ್ದುಗುಂಡಿನ ಗಂಧ, ರಕ್ತದ ರುಚಿ ಮತ್ತು ಬೆಂಕಿಯ ಬಿಸಿಯನ್ನು ಅನುಭವಿಸುವ ಪ್ರಯತ್ನವೋ ಎಂಬಂತೆ 'ಆತ' ಕಿಡಕಿಯ ಹೊರಗೆ ತಿಳಿಯಾದ ಆಕಾಶವನ್ನು ನಿಟ್ಟಿಸಹತ್ತುತ್ತಾನೆ. ಅಲ್ಲಿ ಎತ್ತರದಲ್ಲಿ, ತುಂಬಾ ಎತ್ತರದಲ್ಲಿ ಚುಕ್ಕೆಗಳ ಹಾಗೆ ಅನೇಕ ಪಾರಿವಾಳಗಳು ಹಾರಾಡುತ್ತಿವೆ.

'ಅದು...... ಅನೇಕ..... ಜನರಿದ್ದಾರೆ' - ಇದರ ಪ್ರತಿಧ್ವನಿ ಕಡಿದು ಹೋಗುತ್ತದೆ.

ರೈಲಿನ ಚಕ್ರಗಳು ಓಡುತ್ತಿರುವ ಹಳಿಗಳ ಕೆಳಗೆ ಅದೆಷ್ಟು ಸಣ್ಣ-ಪುಟ್ಟ ಸೇತುವೆಗಳಿವೆ. ಸೇತುವೆಯ ಹಳಿಗಳ ಸಂಬಂಧವನ್ನು ಇನ್ನೊಂದು ಬದಿಯ ನೆಲದೊಡನೆ ಜೋಡಿಸುವಾಗ

ರೈಲಿನ ವಿಶಿಷ್ಟವಾದ ಬಳಕುವಿಕೆಯು ಆತನಿಗೆ ಪ್ರಿಯವಾಗಿ ಕಾಣುತ್ತದೆ. ವಿದ್ಯುತ್ ತಂತಿಯೊಂದಿಗೆ ಪೆಂಟೊಗ್ರಾಫು ಘರ್ಷಣೆಗೊಂಡು ಕಿಡಿಗಳನ್ನು ಎಬ್ಬಿಸಿದಾಗಲೆಲ್ಲ ಆ ಕಿಡಿಗಳು ತನ್ನ ರೋಮಛಿದ್ರಗಳಲ್ಲಿ ಚುಚ್ಚುತ್ತಿರುವಂತೆ 'ಆತ'ನಿಗೆ ಭಾಸವಾಗುತ್ತದೆ. 'ಆತ' ಚಿಂತಾಗ್ರಸ್ತನಾಗಿ ಕಿಡಕಿಯ ಹೊರಗೆ ಹಬ್ಬಿಕೊಂಡ ಉಬ್ಬು ತಗ್ಗುಗಳ ಬಯಲನ್ನು ನೋಡ ಹತ್ತುತ್ತಾನೆ. ನೀಲಿ ಆಕಾಶದಲ್ಲಿ ಚುಕ್ಕಿಗಳಂಥ ಆ ಪಾರಿವಾಳಗಳು ಈಗ ಸ್ಪಷ್ಟವಾಗಿ ಕಾಣಹತ್ತುತ್ತವೆ.

'ಇದೋ, ನಿನ್ನ ಮುಂಗಡದ ಐದು ಸಾವಿರ' - ಪ್ಯಾಂಟಿನ ಜೇಬಿನ ಸ್ಪಂದನ ಆತನಿಗೆ ಜ್ಞಾಪಿಸುತ್ತದೆ.

'ಉಳಿದ ಇಪ್ಪತ್ತು ಸಾವಿರ ಕೆಲಸ ಮುಗಿದ ಮೇಲೆ' - ಹಿಪ್‌ಪಾಕೇಟಿನ ಚೂರಿಯ ಉಬ್ಬರ ಪ್ರಚೋದಿಸುತ್ತದೆ. 'ಹಣಕಾಸು ಯಾವ ಪರಿಶ್ರಮದ ಸಂಭಾವನೆಯೂ ಆಗಲಾರದು' - ಧಸಾಳನ ದನಿ 'ಆತ'ನ ಅಸ್ತಿತ್ವದ ಅದೆಷ್ಟೋ ಸಂದು-ಗೊಂದುಗಳಲ್ಲಿ ಮೊಳಗುತ್ತದೆ.

'ನಾವು ಆತನಿಗೆ ಆಫರ್ ಮಾಡಿದ್ದೆವು. ಬಟ್ ದಟ್ ಬಾಸ್ಟರ್ಡ್ ರೆಫ್ಯೂಜ್ಡ್ ಇಟ್'

ಯಾವುದೋ ಒಂದು ಜೇಡನ ಹುಳು ಆತನ ಮನಸ್ಸಿನ ಸುತ್ತ ಬಲೆಯನ್ನು ನೇಯುತ್ತ ಹೋಗುತ್ತದೆ. ಹಿಂದೆಂದೂ ಇಂಥ ಅನುಭವ ಆಗಿರಲಿಲ್ಲ. ಇವತ್ತೇ ಏಕೆ ಹೀಗಾಗುತ್ತಿದೆ? ಹೊಕ್ಕಳಿನಲ್ಲಿ ಇದು ಎಂಥ ನೋವು?

ಈ ನೋವು ಹಿಂದೆ ಎಂದೂ ಕಾಣಿಸಿಕೊಂಡಿರಲಿಲ್ಲ. ಆದರೆ ಈ ನೋವು ಇರುವುದಾದರೂ ಎಲ್ಲಿ? ಕಷ್ಟದ ಅನುಭವವನ್ನು ಕೊಡುವಂಥದ್ದು ನೋವು ಎನಿಸುತ್ತದೆ. ಈ ಅನುಭವಕ್ಕೆ ಯಾವ ಹೆಸರಿನಿಂದ ಕರೆಯಬೇಕು? ಸಾವಿರಾರು ವರ್ಷಗಳ ಯಾವುದೋ ಮುದಿ ಆಲದ ಬೇರುಗಳು ಹೊಕ್ಕಳಿನಲ್ಲಿ ಒಳಗೊಳಗೇ ಹಬ್ಬುತ್ತಾ ನಡೆದಿವೆ ಎಂಬಂಥ ಅನುಭವವಾಗುತ್ತಿದೆ ಎಂದು ಮಾತ್ರ ಹೇಳಬಹುದು. 'ಆತ'ನು ತನ್ನ ಇರಾದೆಗೆ ಒಂದು ನಿರ್ಣಯಾತ್ಮಕ ರೂಪು ಕೊಡುವುದಕ್ಕಾಗಿ ಮತ್ತು ಈ ಅನುಭವದಿಂದ ಮನಸ್ಸನ್ನು ಬೇರ್ಪಡಿಸುವುದಕ್ಕಾಗಿ ಕಿಡಕಿಯ ಹೊರಗೆ ನೋಡ ಹತ್ತುತ್ತಾನೆ. ವಿದ್ಯುತ್ತಿನ ತಂತಿಯ ಮೇಲೆ ಬಿಳಿ ರೆಕ್ಕೆಯ ಪಾರಿವಾಳಗಳು ಒಂದೇ ಸಾಲಾಗಿ ಕುಳಿತಿವೆ. ಒಳಗೆ ಫ್ಯಾನಿನ ಮೇಲೆ ಬಣ್ಣದ ರೆಕ್ಕೆಯ ಪುಟ್ಟ ಗುಬ್ಬಚ್ಚಿ ಈಗಲೂ ನಳನಳಿಸುತ್ತಿದೆ. 'ಆತ'ನ ಕಪ್ಪು ಕನ್ನಡಕ ಮಸುಕಾಗಹತ್ತುತ್ತದೆ. 'ಆತ' ತನ್ನಷ್ಟಕ್ಕೆ ತಾನು ಅತಿ ದುರ್ಬಲನಾಗಿಯೂ, ದಣಿದವನಾಗಿಯೂ, ಪರಾಜಿತನಾಗಿಯೂ ಕಾಣುತ್ತಾನೆ. ಧಾವಿಸುತ್ತ ಸಾವಿರಾರು ಮೆಟ್ಟಿಲುಗಳನ್ನು ಹತ್ತಿ ಬಂದಂತೆ ಆತನಿಗೆ ಭಾಸವಾಗುತ್ತದೆ. ಇನ್ನೂ ಹಗಲಿನ ಒಂಬತ್ತು ಗಂಟೆ ಮಾತ್ರ ಆಗಿದೆ. ಆಗಲೇ ಇದೆಂಥ ದಣಿವು? ಕಿಡಕಿಯಿಂದ ಜಾರಿ ಹೋಗುತ್ತಿದ್ದ ದೃಶ್ಯ

ಆತನಿಗೆ ಕಾಮಾಲೆಯ ರೋಗಿಯಂತೆ ಕಾಣುತ್ತದೆ. ರೋಡು ಧೂಳಿನಿಂದ ಕೂಡಿದೆ, ಆಕಾಶ ಕೊಳೆಯಾಗುತ್ತಿದೆ. ಭವನಗಳ ನೆರಳುಗಳು ಮಾಸುತ್ತಿರುವ ಚಿತ್ರದ ಬಣ್ಣಗಳನ್ನು ಸೂಚಿಸುತ್ತಿವೆ

'ಎಂಥ ಸಂದರ್ಭ ಒದಗಿದರೂ ನೀನು ಆತನ ಜೊತೆಗೆ ಮಾತಾಡಲೇ ಕೂಡದು'

ಆದರೆ ಢಸಾಳನ ಮಾತುಗಳು ಮುಂದುವರೆದಿವೆ. 'ಆತ' ಕಣ್ಣುಗಳಿಂದ ಮಾತ್ರ ಕೇಳುತ್ತಿದ್ದಾನೆ. 'ಆತ'ನ ಮುಖ ಸಪಾಟಾಗಿದೆ, ಆದರೆ ಒಳಗೆ ಭೂಕಂಪನದ ಲಕ್ಷಣಗಳು ಎಚ್ಚರಗೊಂಡಿವೆ. ಕತ್ತಲೆಯ ಗಾಜುಗಳ ಹಿಂದೆ 'ಆತ'ನ ಕಣ್ಣುಗಳು ಧೂಳು ತುಂಬಿದ ಬಿರುಗಾಳಿಯನ್ನು ಎದುರಿಸುತ್ತಿವೆ. 'ಆತ'ನ ಹೃದಯ ಮತ್ತು ಮಸ್ತಕದಲ್ಲಿ ಅದೆಷ್ಟು ಫ್ಯೂಜಿಯಾಮಾಗಳು ಸ್ಫೋಟಗೊಳ್ಳುತ್ತಿವೆಯೊ! 'ಆತ'ನ ದೇಹ ಅದೆಷ್ಟು ಸಲ ಪ್ಯಾರಿಸ್ಸಿನ ಎಫಿಲ್ ಟಾವರಿನಿಂದ ಬೀಳುತ್ತಿದೆಯೊ! 'ಆತ'ನ ಅಸ್ತಿತ್ವದ ಮೇಲೆ ಅದೆಷ್ಟು ಸಲ ನ್ಯೂಯಾರ್ಕಿನ ಅತಿ ಎತ್ತರದ ಎಂಪಾಯರ್ ಸ್ಟೇಟ್ ಕಟ್ಟಡಗಳು ಕುಸಿದು ಬೀಳುತ್ತಿವೆಯೊ! 'ಆತ'ನ ಅಂತರಾಳದಲ್ಲಿ ಕಂಬನಿ ತುಂಬಿದ ಅದೆಷ್ಟು ಬಿರುಗಾಳಿಗಳು ಬೀಸುತ್ತಿವೆಯೊ! 'ಆತ' ವಿಕ್ಷಿಪ್ತನಂತೆ ತನ್ನ ಎರಡೂ ದವಡೆಗಳನ್ನು ಕಚ್ಚಿಕೊಳ್ಳುತ್ತಾನೆ.

'ಬಂಗಾಲಿ ಲಿಟರೇಚರ್ ಎಷ್ಟೊಂದು ರಿಚ್ ಆಗಿದೆ!' - ಅದರ ವಿಶಾಲತೆಯನ್ನು ತೋರಿಸುವ ಭಂಗಿಯಲ್ಲಿ ಢಸಾಳನು ತನ್ನ ಎರಡೂ ಕೈಗಳನ್ನು ಅಗಲಿಸುತ್ತಾನೆ.

'ನಿಮಗೆ ಬಾಂಗ್ಲಾ ತಿಳಿಯುವುದೆ?' - 'ಆತ' ಕೇಳಿ ಬಿಡುತ್ತಾನೆ.

'ಹ್ಞಾಂ!'

'ಅಚ್ಛಾ?' - ಅರಿವಿಲ್ಲದಂತೆ ಪ್ರಸನ್ನತೆಯ ಒಂದು ಅಜ್ಞಾತ ಅನುಭವವು 'ಆತನ' ರೋಮ ರಂಧ್ರಗಳನ್ನು ಹಸಿ ಮಾಡುತ್ತ ಸುಳಿದು ಹೋಗುತ್ತದೆ.

'ಆಮಾರ ಸೋನಾರ ಬಾಂಗ್ಲಾದೇಶ' - ಢಸಾಳ ಕೈ ಬೀಸುತ್ತ ಪ್ರಸಿದ್ಧವಾದ ಘೋಷಣೆಯನ್ನು ಕೂಗುತ್ತಾನೆ. ಕಪ್ಪು ಕನ್ನಡಕದ ಹಿಂದೆ 'ಆತ'ನ ಕಣ್ಣುಗಳು ಪಟಪಟನೇ ಬಡಿದುಕೊಳ್ಳುತ್ತವೆ.

'ಅರೇ ಬಂಧು; ನಾನು ಇದನ್ನು ಬಾಂಗ್ಲಾದಲ್ಲಿ ಹೇಳಿದ್ದೇನೆ' - ಢಸಾಳನ ಕಪ್ಪು ಮುಖದ ಮೇಲೆ ಮಕ್ಕಳಂಥ ತುಂಟತನ ಮಿಂಚುತ್ತದೆ.

ಢಸಾಳನ ಈ ಮುಗ್ಧವಾದ ಹಾಸ್ಯದಿಂದ 'ಆತ' ಅಕಸ್ಮಾತ್ತಾಗಿ ನಗುತ್ತಾನೆ. ಜೇಡನ ಬಲೆ ಹರಿದು ಹಂಚಿ ಹೋಗುತ್ತದೆ.

‘ಆತ’ ನಗುತ್ತಾನೆ, ಒಳಗಿನಿಂದ, ಅಂತರಾಳದಿಂದ ಹೊಕ್ಕುಳಲ್ಲಿ ಮುದಿ ಆಲದ ಬೇರುಗಳು ಹಬ್ಬುತ್ತ ಹೋಗುತ್ತವೆ. ವಿದ್ಯುತ್ ತಂತಿಯ ಮೇಲೆ ಬಾವಲಿಯ ಒಂದು ಹೆಣ ನೇತಾಡುತ್ತಿದೆ. ಬಿಳಿ ರೆಕ್ಕೆಯ ಪಾರಿವಾಳಗಳ ಹಿಂಡು ಎಲ್ಲೆಲ್ಲೋ ಹಾರಾಡಿ ಮತ್ತೆ ತಂತಿಯ ಮೇಲೆ ಸಾಲಾಗಿ ಬಂದು ಕುಳಿತಿದೆ. ಫ್ಯಾನಿನ ಜಾಲರಿಯ ಮೇಲೆ ಬಣ್ಣದ ರೆಕ್ಕೆಗಳ ಪುಟ್ಟ ಗುಬ್ಬಚ್ಚಿ ನಳನಳಿಸುತ್ತಿದೆ. ‘ಆತ’ ಒಂದೇ ಸಮನೆ ನಗುತ್ತಿದ್ದಾನೆ, ನಗುತ್ತಲೇ ಇದ್ದಾನೆ. ಮತ್ತು ಹೊಕ್ಕುಳಲ್ಲಿ ಮುದಿ ಆಲದ ಮರವು ತನ್ನ ಬೇರುಗಳನ್ನು ಹಬ್ಬಿಸುತ್ತ ನಡೆದಿದೆ. ಯಾವುದೋ ಆಣೆಕಟ್ಟೆ ಒಡೆದು ಕೋಡಿ ಹರಿದಂತೆ ‘ಆತ’ ನಗುತ್ತಿದ್ದಾನೆ. ನಗುವುದರಲ್ಲಿ ‘ಆತ’ನ ಕಪ್ಪು ಕನ್ನಡಕ ಬಿದ್ದು ಒಡೆದು ಹೋಗುತ್ತದೆ. ರೈಲಿನ ತಲೆಯ ಮೇಲೆ ತಂತಿಯ ಜೊತೆಗೆ ಪೆಂಟೊಗ್ರಾಫು ಘರ್ಷಣೆ ಪಡೆದು ಕಿಡಿಗಳನ್ನು ಎಬ್ಬಿಸುತ್ತದೆ. ಚಟ್‌ಚಟ್ ದನಿಯೊಂದಿಗೆ ಚುಕ್ಕೆಗಳು ಒಡೆದು ಹಂಚಿ ಹೋಗುತ್ತವೆ. ‘ಆತ’ ನಗುತ್ತ ಬಾಗಿ, ಒಡೆದ ಕಪ್ಪು ಗಾಜಿನ ಚೂರುಗಳನ್ನು ಎತ್ತಿ ಕಿಟಕಿಯಿಂದ ಆಚೆಗೆ ಚಿಮ್ಮಿ ಎಸೆಯುತ್ತಾನೆ. ಅಷ್ಟರಲ್ಲಿ ರೈಲಿನ ಸಿಳ್ಳು ಮೊಳಗುತ್ತದೆ. ಮತ್ತು ಪೆಂಟೊಗ್ರಾಫಿನಿಂದ ಪಡೆದ ಬಲದಿಂದ ಚಕ್ರಗಳು ಸೇತುವೆಯನ್ನು ದಾಟಿ ಹೊರಟುಹೋಗುತ್ತವೆ.

●

# ದಾರಿ ಯಾವುದೂ ಇಲ್ಲ

ಮೂಲ : ಖಲೀಲ್ ಮಾಮೂನ್
ಅನು : ಎಲ್. ಎಸ್. ಮುಕುಂದರಾಜ್

ನೀರವ ದೂರ ದೂರದ ತನಕ
ನಿಶ್ಶಬ್ದ ಚಾಚಿದೆಡೆಯೆಲ್ಲ ಬೇಸರದ ಹಿಮರಾಶಿ
ತನ್ನ ತಣ್ಣನೆಯ ಬಿಳುಪು ಮಂಜಿನಲಿ
ಹುಹುಹುಹುಹುವೆನುವ ಛಳಿ
ರಕ್ತದ ಹಿಮಗಲ್ಲುಗಳು ಕೊನೆಯಿರದಂತೆ ಮುಚ್ಚಿ
ದೂರ ದೂರದ ತನಕ ಚಲಿಸುತ್ತಿವೆ
ಸಾವಿನಲೆಗಳು; ನಾಲ್ಕೂ ನಿಟ್ಟಿನಲ್ಲಿ
ದಂಡೆಗಳು ಕಡಿದು ಬೀಳುತ್ತಿವೆ
ತೀರ ತೋರದೆ ತಿರುಗುತ್ತಿದೆ ಸದಾ ನೀರಿನಲ್ಲಿ
ದೇಹ ಜೀವಗಳ ತೆಪ್ಪ
ಜನ್ಮ ಜನ್ಮಾಂತರಗಳಲ್ಲೂ ಹೃದಯ ಒಬ್ಬೊಂಟಿ.

* * *

ಕ್ಷಣಗಳ
ಸಂಕಷ್ಟದ ಘಳಿಗೆಗಳಲ್ಲೂ
ಶಕ್ತ ಚಕ್ರಗಳ ಮೇಲೆ ಓಡುತ್ತಲೇ ಇದ್ದೇವೆ
ಸಂದರ್ಭ ಒದಗಿದಂತೆಲ್ಲಾ ಕಾಲ
ಗೋಡೆ ಬಾಗಿಲುಗಳನ್ನು
ಕಟ್ಟುತ್ತಲಿದೆ ಕೆಡವುತ್ತಲಿದೆ;
ಈ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿವೆ
ಮನುಜರ ತುಕಡಗಳು ತೇಲುತ್ತಿವೆ ನಮ್ಮ
ಕಣ್ಮುಂದೆಯೇ ದೂರ ದೂರದತನಕ
ಈಗ ಕೇವಲ

ನೀರಲ್ಲದೆ ಮತ್ತೇನೂ ಉಳಿದಿಲ್ಲ,
ಜಗತ್ತಿನ ಕಟ್ಟಕಡೆಯ ರಸ್ತೆ
ತುದಿಯಲ್ಲಿ ನಿಂತಿರುವ ಅಸಹಾಯಕ
ಹೆಜ್ಜೆಗಳು ಗಡಗಡ ನಡುಗುತ್ತ ತೊಡರುತ್ತಿವೆ,
ಈಗ ಆಗಸದ ಹಸಿರು ವನವೆಡೆಗೆ
ಬೇರೆ ದಾರಿಯೇ ಇಲ್ಲ.

* * *

ಹೂವಿನ ಕಣಿವೆಗಳು ನಿರ್ಜನವಾಗಿವೆ
ಕಣಿವೆಯ ಏಕಾಂತದಲ್ಲಿ
ಮಳೆ ಹನಿಗಳು
ತೊಟ ತೊಟನೆ ಬೀಳುತ್ತಿರುವ ಶಬ್ದ
ಧೈರ್ಯ ದೃಢತೆಯ ಕಲ್ಲುಬಂಡೆಗಳು
ಉಪ್ಪಿನಂತೆ ಕರಗುತ್ತಿವೆ
ಭೂತದ ದುಃಖಿ ನದಿಗಳಲ್ಲಿ
ಸೇರಿಕೊಳ್ಳುತ್ತಿವೆ.

(ಛಳಿ ಈಗ ಅದೆಷ್ಟು ಹರಳುಗೊಂಡಿದೆ,
ಹಸಿ ಸೌದೆ ಮತ್ತು ಮನುಷ್ಯರ ಬೇಯುವ ಕಾಯಗಳ
ಜೊತೆ ಜೊತೆಗೆ ಸಮಾಧಿಗಳು
ಧಗಧಗ ಉರಿಯುತ್ತಿವೆ)

ದೂರದ ಬೆಟ್ಟಗಳ ಹಿಮ
ಗುಹೆಗಳಲ್ಲಿ ಪರಿಮಳವಿರುವ ಕಾಡಮೇಣದ
ಬತ್ತಿ ಉರಿಯುತ್ತಿದೆ; ನೀಲಿ ನೀಲಿ
ಸುರಂಗಗಳಡಿ ಹರಿವ ಅಜ್ಞಾತ ಜಲದಲ್ಲಿ
ಅಗ್ನಿಪರ್ವತವುಕ್ಕಿ ರಕ್ತ ಕುದಿಯುತ್ತಿದೆ
ಬೆಂಕಿಕೊಂಡಗಳಲ್ಲಿ ಕೆಂಪನೆ ನೋವು
ಕಿಡಿ ಕಿಡಿಯಾಗಿ ಕೆದರುತ್ತಿದೆ.
ಮನದೇಕಾಂತದ ಕತ್ತಲಿನಲ್ಲಿ ನೋವಿನ
ಮಿಂಚು ಫಳಫಳನೆ ಮಿಂಚುತ್ತಿದೆ

ಆಕಾಶದ ಹರವಿನಲ್ಲಿ ನಕ್ಷತ್ರಗಳ
ಕೆಳಗೆ ಕಾಡು ಕೂಡ ಪ್ರಜ್ವಲಿಸಿ
ದಾರಿ ತನಗೆ ತಾನೆ ತೆರೆಯುತ್ತಿದೆ.

* * *

ಹೇ ಮನವೆ;
ಆದಿಯಿಂದ ಅಂತ್ಯದವರೆಗೆ ಅಸ್ಪಷ್ಟ
ಸ್ವಪ್ನತರಂಗಗಳು ಹರಿಯುತ್ತಲೇ ಇವೆ
ಕುರುಡು ಕಂಬಿಗಳ ಹಿಂದೆ ನಡುಗುತ್ತಿವೆ
ಬಯಕೆಗಳ ಹೊಳೆ
ಸ್ವಾತಂತ್ರ್ಯಕ್ಕಾಗಿ ಸುಯ್ಯುಡುತ್ತಿದೆ.
ಹೇ ಮನವೆ
ಮುಕ್ತತೆಯ ಕಡೆಗಿದ್ದ ಕೊನೆಯ
ಹೆಜ್ಜೆಯೂ ಕುಸಿಯಿತಲ್ಲ
ಗೋಡೆ ಬಾಗಿಲುಗಳನ್ನು ಕೆಡವಿ ಬಿಡು
ಕನಸು ಮತ್ತು ವಾಸ್ತವಗಳಿಗೆ ತರ್ಕದ
ಧ್ವನಿಗಳು ತರ್ಕದ ಗದ್ದಲಗಳು
ನೀರ ನೀರವತೆಯಲ್ಲಿ ಕೊನೆಯಾಗಲಿ ಬಿಡು
ನದಿಯ ತೀರಗಳು ತೆರೆದುಕೊಳ್ಳಲಿ ಬಿಡು
ನದಿಗಳೆಲ್ಲ ಸಮುದ್ರಗಳಲ್ಲಿ
ಸೇರಿಕೊಳ್ಳಲಿ ಬಿಡು.

* * *

ಅನಂತತೆಯ ಅವಕಾಶ ನಿರ್ಬಂಧಗೊಂಡಿದೆ
ಭೂತ ವರ್ತಮಾನಗಳು ಕೆಡವಿ ಬಿದ್ದಿವೆ
ಕಾಲ ಕೊನೆಗೊಂಡಿದೆ
ನಿರ್ವಾತದಲ್ಲಿ ವಿಮಾನಗಳು
ಯಾಕಾದರೂ ಹಾರುತ್ತವೊ?
ಮಂಗಳ ಗುರು ಶನಿಗಳೆಡೆ ಚಾಚಿ
ವಿಮಾನ ಢಿಕ್ಕಿ ಹೊಡೆದು ಬೂದಿಯಾಗಲಿ ಬಿಡು

ದುರಾಸೆಗೆ ಬಂದ ವಸಂತ
ತಿರುಗಿ ಶಿಶಿರವಾಗಲಿ ಬಿಡು
ಹಸಿವು ಭಯದ ಉತ್ತರೀಯ ಹೊದ್ದು
ತಿರುಗುವ ಭೂತಾತ್ಮಗಳನ್ನು
ಸೂತ್ರ ಹರಿದ ಗಾಳಿಪಟಗಳಂತೆ ಸುಂಟರ
ಗಾಳಿಯಲ್ಲಿ ಹಾರಿಸಿಬಿಡು
ಉಸಿರಿನ ಕನಸನ್ನೆಚ್ಚರಿಸಲು ನುಡಿಸು ಕಿನ್ನುಡಿಯ

ಹಾಳುಬಿದ್ದ ಕಣ್ಣುಗಳಲ್ಲಿ ಪೌರುಷದ
ರಂಗಿನ ಚುಮುಕುಗಳನ್ನೇಕೆ ತುಂಬಲಾರೆ?
ಹೆಣದ ಮೇಲುದದ ಮೇಲೆ
ನಿನ್ನ ಗಾಯದ ಕೆಂಪನೆ ರಂಗನ್ನಾದರೂ
ಬಳಿಯಬಾರದೇ?

* * *

ಎಲೆ ಮನವೆ
ರಾತ್ರಿಯ ಗಾಢಾಂಧಕಾರದಲ್ಲಿ
ಗಾಢಗೊಂಡ ಅಜ್ಞ ನಿದ್ರೆ
ಸೋತು ಬೇಸರ ಬಿದ್ದ ಕಣ್ಣುಗಳಲ್ಲಿ
ಸೋಪಿನ ಕನಸುಗಳನ್ನೇಕೆ ಎಚ್ಚರಿಸುತ್ತಿರುವೆ
ಛಿದ್ರಿತ ನೆಲದಲ್ಲಿ ಕಗ್ಗತ್ತಲು
ಕೊನೆಯಾಗಲಿ.

ಹೇ ಮನವೆ
ಇಂಥ ಗಾಢಾಂಧಕಾರವಲ್ಲಿ ಈ
ಜಗತ್ತನ್ನೇಕೆ ನಿಯಂತ್ರಿಸಲಾರೆ
ನರಕದ ನೇರ ದಾರಿಯಲ್ಲಿ
ಬೆಳಕನ್ನೇಕೆ ತರಲಾರೆ
ಬೆಳಕನ್ನೇಕೆ ತರಲಾರೆ?

# ಪೋಸ್ಟರ್
(ಕವಿತೆ : 2)*

ಮೂಲ : ಬಿಲ್ಕೀಸ್ ಝುಫಿರುಲ್ಹಸನ್
ಅನು : ಚಿಂತಾಮಣಿ ಕೊಡ್ಲೆಕೆರೆ

ನನ್ನ ತಾಯಿಗೆ ಹೇಳುತ್ತಿದ್ದರು :
'ನೀನು ಈ ಮನೆಯ ಒಡತಿ'
ಮನೆಯೊಡತಿಗಿರಲಿಲ್ಲ
ಈ ಮನೆಯಲ್ಲೊಂದು ನೆಲೆ
'ಮನೆಯೊಡತಿ' ಎಂಬ ಬೆಲೆ

ನಾವು ಕಾಲು ನೀಡಲೆಂದು
ಮುದುಡಿಕೊಂಡಳು ಈಕೆ
ತನ್ನ ಕಾಲನ್ನು
ಮುದುಡಿಕೊಳ್ಳುತ್ತಲೇ
ಪಡೆದುಕೊಂಡಳು ಈಕೆ
ತನ್ನ ಸಾವನ್ನು

ಬದಲಾಗುತ್ತಲೇ ಇತ್ತು
ಮನೆಯ ಹವಾಮಾನ
ಸೀರೆಯ ಸೆರಗಿನಿಂದ
ಗಾಳಿ ಬೀಸಿದಳು ಇವಳು
ಧಗಧಗ ಸೆಕೆಯಲ್ಲಿ.

ರಕ್ತದ ಬಿಸಿ ನೀಡಿ
ಚಿಂತೆಯಲ್ಲೇ
ನೀಲಿಯಾದಳು ಇವಳು
ಗಡಗಡ ಚಳಿಯಲ್ಲಿ

---

* *'ಪೋಸ್ಟರ್' ಕವಿತಾ ಸರಣಿಯ ಎರಡನೇ ಕವಿತೆ.*

ನನ್ನಮ್ಮ ದೇವಿ,
ಧರೆಗಿಳಿದ ದೇವತೆ,
ತ್ಯಾಗದ ಮೂರ್ತಿ
- ಹೇಳಿ ದಣಿಯಲಿಲ್ಲ ಅವರು
ಈಕೆಗೆ ಗೊತ್ತು
ಅವರು ಕೇಳುವ ಮೊದಲೇ
ಅವರ ಬೇಡಿಕೆಗಳು
ನೀಡುತ್ತಿದ್ದಳು ಅವರಿಗೆ ವರದಾನವನ್ನು
(ದೇವತೆಯರಿಗೆ ಕೊಡುವುದಷ್ಟೇ ಗೊತ್ತು
ಕೊಳ್ಳುವುದಲ್ಲ)

ಇತರರಿಗೇ ಮುಡಿಪು
ಇವಳ ಇಡೀ ಜೀವನ
ಯೋಚಿಸಲಿಲ್ಲ ಈಕೆ ತನ್ನ ಬಗ್ಗೆ
ತನ್ನ ಹಕ್ಕಿನ ಬಗ್ಗೆ
(ಯೋಚಿಸಿದರೂ ಏನು ವ್ಯತ್ಯಾಸವಿತ್ತು?
ಹಕ್ಕಿಗಾಗಿ ನಡೆವ ಹೋರಾಟಗಳು
ಪಾಪ!
ಈಕೆಗದೆಲ್ಲಿ ಗೊತ್ತಿತ್ತು?)

ಈಕೆ ಇಷ್ಟೆ:
ಒಬ್ಬರಿಗೆ ಮಡದಿ
ಇನ್ನೊಬ್ಬರಿಗೆ ತಾಯಿ
ಮತ್ತೊಬ್ಬರಿಗೆ ಮಗಳು
ಎಲ್ಲರೂ ಅವಳವರೆ
ಅವಳು ದೂರುವುದು ಯಾರನ್ನು?

ಈಕೆ ಸತ್ತಾಗ ಎಲ್ಲರೂ ಅತ್ತರು
ದುಃಖಿಸಿದರು
ಯಾರು,
ಇನ್ನು ಈ ಮನೆಯ
ನೋಡಿಕೊಳ್ಳುವರಾರು?
ಕೇಳಿಕೊಂಡರು ಎಲ್ಲ ಒಬ್ಬರೊಬ್ಬರಿಗೆ

ನಾನೂ ನನ್ನ ಅಮ್ಮನಂತೆಯೇ
ಕೋಶದೊಳಗೆ ಹುದುಗುತ್ತಲೇ
ಸಾಯುವೆನು ಒಂದು ದಿನ
ನನಗೂ ಉಂಟು ಬದುಕುವ ಹಕ್ಕು
ಬಹುಶಃ
ನಾನೂ ಅದನ್ನು ಕೇಳಲಾರೆ
ಧೈರ್ಯವೂ ಇಲ್ಲ ನನಗೆ
ಪ್ರೀತ್ಯಸ್ಥರ ಜತೆಗೆ ಜಗಳಾಡಲಿಕ್ಕೆ
(ಕೇಳಿದರೂ ಕೂಡ ನನ್ನ ಕೈ ಬರಿದೆ!)
ದೂರಿದರೂ ಅದರಿಂದ ಉಪಯೋಗವಿಲ್ಲ
ಅಷ್ಟೇಕೆ
ಆ ಕ್ಷಣದಿಂದಲೇ
ಕಳೆದುಕೊಳ್ಳುವೆ ನಾನು
ಧರೆಗಿಳಿದ ದೇವತೆ
ಆಗಬಹುದಾದೊಂದು ಕಿಂಚಿತ್ತು ಸಾಧ್ಯತೆ.

●

## ಗಂಗಾ

*ಮೂಲ :* **ಕುಮಾರ ಪಾಶಿ**
*ಅನು :* **ಚಿಂತಾಮಣಿ ಕೊಡ್ಲೆಕೆರೆ**

ಗಂಗಾ,
ನಾನು ಶತಮಾನಗಳಿಂದ ಬಳಲಿರುವೆ
ಗಂಗಾ,
ನಾನೀಗ ನಿನ್ನ
ದಡಕ್ಕೆ ಬಂದು ಕುಳಿತಿರುವೆ
ಗಂಗಾ,
ನಾನೊಂದು ಅಲ್ಲಾಡದಂಥ
ಕಲ್ಲಾಗಿಬಿಡಬಹುದು

ಗಂಗಾ,
ಹಾಗಾಗಿಬಿಟ್ಟರೆ ನೀನೇ
ನಿನ್ನ ಅಲೆವಲೆಗಳ ಕೈಗಳಿಂದ
ನನ್ನನ್ನು ಎತ್ತಿಕೋ
ತಬ್ಬಿಕೋ
ಗಂಗಾ,
ನೀ ಹರಿಯುವಲ್ಲೆಲ್ಲ
ನನ್ನನ್ನೂ ಕರೆದೊಯ್ಯಿ

## ಪಯಣದೊಳಗಣ ಪಯಣ

ಮೂಲ : ಹಮೀದ್ ಅಲ್ಮಾಸ್
ಅನು : ಚಿಂತಾಮಣಿ ಕೊಡ್ಲೆಕೆರೆ

ಕೇಳುತ್ತಿದೆ ರಕ್ತದ ಪ್ರತಿಯೊಂದು ಕಣ:
ಒಪ್ಪಿಕೊಳ್ಳುವುದಿಲ್ಲವೆ
ಈಗಲೂ ನಿನ್ನ ಸೋಲನ್ನು?
ನಿನ್ನ ಕೈಯಲ್ಲಿ ಏನೂ ಇಲ್ಲ
ಇರುವುದು
ಆಕೃತಿಯಿಲ್ಲದ ಒಂದು ಕನ್ನಡಿ
ಅದರಲ್ಲಿ ನೀನು
ಭೂಮಿಯ ಅಂತರಾಳವನ್ನೇ ನೋಡಲಾಗಲಿಲ್ಲ
ಇನ್ನು -
ಬಯಲ ಹಿಡಿಯುವುದುಂಟೆ?
ನಿನ್ನ ಉದ್ದೇಶವೋ
ಪಯಣದೊಳಗಣ ಪಯಣ!
ಬಿರುಗಾಳಿಯನ್ನು ಹಿಡಿಯಲು
ಆಗಲಿಲ್ಲ ನಿನಗೆ

ಪರ್ವತದ ತಳ ಮುಟ್ಟಲು
ಆಗಲಿಲ್ಲ ನಿನಗೆ
ನಿನ್ನ ಗುರಿಯ ಪರಿಧಿ ಮುಟ್ಟಲೂ
ಆಗಲಿಲ್ಲ ನಿನಗೆ
ಸಮುದ್ರ ನಗುತ್ತಿದೆ ನಿನ್ನ ಅಸಹಾಯಕತೆಗೆ
ನಿನ್ನಲ್ಲೇ ನಿನಗೆ ಆಸರೆಯಿಲ್ಲ
- ಇನ್ನು ಇನ್ನೆಲ್ಲಿ ಆಶ್ರಯ?
ಅಜ್ಜಲ್*ನಿಂದಲೂ ತಿರುಗುತ್ತಿದೆ ಭೂಮಿ
ಮುಗಿದಿಲ್ಲ ಅದರ ಪಯಣ
ನಿನ್ನದು
ಪಯಣದೊಳಗಣ ಪಯಣ
ಏನು ಸಿಕ್ಕೀತು ನಿನಗೆ-
ನಿನ್ನ ಭಗ್ನ ಆಸೆಯ ಚೂರುಗಳಲ್ಲದೆ?

ಕನ್ನಡಿಗೊಂದು ರೂಪ ಕೊಡುವ ಕೆಲಸ
ನಿನಗಾಯಿತು ತುಂಬ ಕಷ್ಟ
ಆ ಆಸೆಯ ಮರುಳಲ್ಲಿ ನಿನ್ನ
ಬೆರಳುಗಳೂ ಮುರಿದು ನಷ್ಟ.

---

* *ಅಜ್ಜಲ್ : ದೇವರು ವಿಶ್ವವನ್ನು ಸೃಷ್ಟಿಸಿದ ಮೊದಲ ದಿನ.*

# ಅಲೆಮಾರಿ ದನಗಳು

ಮೂಲ : ಬಲರಾಜ್ ಕೋಮಲ್
ಅನು : ಅಬ್ದುಲ್ ಮಜೀದ್‌ಖಾನ್

೧. ಮನೆಗಳಲ್ಲಿದ್ದ ಈ ದನಗಳು ಈಗ ಅಲೆಮಾರಿಗಳು
ಸೂರಿಲ್ಲದ ಪರದೇಶಿಗಳು
ನಾಲ್ಕೂ ದಿಕ್ಕಿನಿಂದ ಸಹಸ್ರ ಸಹಸ್ರ ಸಂಖ್ಯೆಯಲ್ಲಿ
ಸಾರ್ವಜನಿಕ ಬೀದಿಗೆ ಬಂದವರು.
ಈಗ ಈ ರಸ್ತೆಯೇ ಇವರ ತಂಗುದಾಣ
ಇಂದು ಇದೇ ಇವರ ದವಸ ಧಾನ್ಯಗಳ ಉಗ್ರಾಣ.
ಇವರ ಸಹಜ ವಿಸರ್ಜನೆಗಳಿಗೆ
ಮುಚ್ಚುಮರೆ ಇರದ ಸುಲಭ ಸೌಲಭ್ಯ ಕೂಡ.
ಇವರ ಕಸಾಯಿಖಾನೆಯೂ ಇದೇ, ಇವರ ವಧಾಸ್ಥಾನವೂ
ಇದೇ, ಇವರ ಗೋರಿಯೂ ಇದೇ.
ಇವರ ವಂಶವಿಕಾಸದ ಸುಖದ ಸುಪ್ಪತ್ತಿಗೆಯೂ ಇದೇ.
(ಬದುಕಿ ಉಳಿದರೆ) ಎಲ್ಲಿ ಇವರು ಬಿಕರಿಯಾಗುವರೋ
ಆ ಮಾರುಕಟ್ಟೆಯೂ ಇದೇ.

೨. ಯಾರು ಸುರಕ್ಷಿತರಾಗಿದ್ದರೋ
ಯಾರು ಸುಸಭ್ಯರಾಗಿದ್ದರೋ
ಅವರು ಭಯಭೀತರಾಗಿ
ಅರೆತೆರೆದ ಕಿಟಕಿಗಳಿಂದ, ಕಿಂಡಿಗಳಿಂದ
ಅವಿಶ್ರಾಂತ ಬೀದಿಗಳಲ್ಲಿ ಜಗಿವ ಈ ಹಿಂಡುಗಳನ್ನು
ನೋಡುತ್ತಾರೆ ಕೆಲಕಾಲ.
ದುರ್ನಾತದ, ಪ್ರಳಯಾಂತಕ ಸದ್ದಿನ ದಾಳಿಯಲ್ಲಿ,
ಹಗಲಿರುಳು
ತಾವೇ ತಯಾರಿಸಿಕೊಂಡ ತೊಗಲುಗಳಲ್ಲಿ
ತಮಗೆ ತಾವೇ ಮನೋಬಲದ ಅಥವಾ ಉಪಾಯದ
ಉಪದೇಶ ಹೇಳಿಕೊಳ್ಳುವ ಪ್ರಯತ್ನದಲ್ಲಿ
ಮಗ್ನರಾಗುತ್ತಾರೆ.

೩. ಯಾರು ಪರಿಚಿತರಿದ್ದರೋ, ಅವರೆಲ್ಲ
ಜನಪ್ರವಾಹದಲಿ ಮರೆಯಾದರು.
ಗುರುತು ಗೌರವಗಳನ್ನೆಲ್ಲ ಕಳೆದುಕೊಂಡರು.
ಇನ್ನು ಕೆಲಕಾಲದಲ್ಲೇ ಎಚ್ಚರಗೊಳ್ಳಲಿರುವರು -
ಮಿತಿ ಮೀರಿದ ವಿಷವೇರಿ ವಿನಾಶಕಾರಿ ಪ್ರಳಯದಲ್ಲಿ
ನಿದ್ದೆ ಹೋಗಿರುವ
ಎಲ್ಲ ಕಲಾವಿದರು, ಚೈತನ್ಯಗಳು, ಉದ್ದೇಶಗಳು.
ಮುಂಬರಿಯುತ್ತ ಬಂದವು ತುಳಿದು ಹಾಕುವ
ಹೆಜ್ಜೆಗಳು
ಸದ್ಯದಲ್ಲೇ ಉಜ್ವಲ ಕನಸುಗಳ ಸ್ವತ್ತು ಸಂಪತ್ತೆಲ್ಲವೂ
ಬೆಂಕಿಯಲಿ ನೆತ್ತರಿನಲಿ ನೆಲದಲ್ಲಿ ಚದುರಿಹೋಗುವುದು.
ಯಾವ ಯಾತ್ರೆಯ ಆರಂಭ ಬಹುಶಃ ಪರ್ವತ-ತುದಿಯ
ಜ್ಯೋತಿಯಲಿ ಆಗಿತ್ತೋ
ಆ ಯಾತ್ರೆಯಾದರೋ ಕೊನೆಗೆ
ಅಪಾಯಕಾರೀ ಇಳಿಜಾರಿನಲಿ ಅಧಃಪತನಗೊಳ್ಳುವುದು.

●

## ಗಾಜಿನ ಮನುಷ್ಯ

ಮೂಲ : ಅಖ್ತರುಲ್ ಈಮಾನ್
ಅನು : ಅಬ್ದುಲ್ ಮಜೀದ್‌ಖಾನ್

ಈ ಹೊತ್ತು ಕೈಗಳನ್ನೆತ್ತಿ ಪ್ರಾರ್ಥನೆಯ ಸಲ್ಲಿಸಬೇಕು
ನನ್ನ ಆಯುಷ್ಯದ ಇನ್ನೊಂದು ದಿನ ಕಳೆಯಿತು.

ದೇವರಿಗೆ ಕೃತಜ್ಞನಾಗಿರಬೇಕು, ಇಂದಿನ ದಿನವೂ
ಯಾವ ಆಪತ್ತೂ ಬರಲಿಲ್ಲ, ಅಂಥ ಕೆಲಸವೇನಾಗಲಿಲ್ಲ.

ನಾಲಗೆಯಿಂದ ನೇರ ಸತ್ಯವೇನಾದರೂ ನುಡಿಯಬಹುದಿತ್ತು
ಅಂತರಾತ್ಮ ಎಚ್ಚರಾಗುತ್ತಿತ್ತು, ನನ್ನ ಪರೀಕ್ಷೆಯಾಗುತ್ತಿತ್ತು.

ದೇವರ ಉಪಕಾರ ಸ್ಮರಿಸಬೇಕು, ಇಂದಿನ ದಿನವೂ
ಎಂದಿನಂತೆಯೇ ಹುಟ್ಟಿತು, ನಾನು ನಸುಕಿನಲಿ ಎದ್ದು ಕುಳಿತೆ.

ಚಹಾ ಕುಡಿದೆ, ದಿನಪತ್ರಿಕೆ ನೋಡಿದೆ, ಉಪಹಾರದ ಜತೆಗೆ
ಹಾಗೇ ಕುಳಿತು ನನ್ನ ಅಂತರ್ದೃಷ್ಟಿಗೆ ಪುರಾವೆ ನೀಡುತ್ತಿದ್ದೆ.

ಸಂಜೆಯಾದಾಗ ಕ್ಷೇಮವಾಗಿ ಸುರಕ್ಷಿತವಾಗಿ ಹಿಂದಿರುಗಿದೆ
ಜೊತೆಗೆ ನಾಳಿನ ಭಯದ ಕಲ್ಪನೆಯ ಹೊತ್ತು ತಂದೆ.

ದರ್ಪಣದಲ್ಲಿ ಗೆರೆ ಮೂಡದಿರಲೆಂದು ಅಂಜುತ್ತ ಅಂಜುತ್ತ
ಸತ್ಕಾರ್ಯವೆಂಬಂತೆ ಹೋಗಿ ಹಾಸಿಗೆಯಲ್ಲಿ ಮೈಚಾಚಿದೆ.

# ಭಾರತದಲ್ಲಿ ಸಾಹಿತ್ಯ ವಿಮರ್ಶೆಯ ಕಾರ್ಯ

ಮೂಲ : ಜಿ. ಎನ್. ದೇವಿ
ಅನು : ಆರ್. ರಾಜಾರಾಂ

ಭಾರತೀಯ ಸಾಹಿತ್ಯ ವಿಮರ್ಶೆ ಹಾಗೂ ಸಂಸ್ಕೃತಿ ವಿಮರ್ಶೆ ಈಚಿನ ವರ್ಷಗಳಲ್ಲಿ ಕಂಡಿರುವ ಮಹತ್ವದ ವಾಗ್ವಾದಗಳನ್ನು ಪರಿಚಯಿಸುವ ಹೊಸ ಅಂಕಣ ಇದು. ಈ ಅಂಕಣದಲ್ಲಿ ಪ್ರಕಟವಾಗುವ ಬರಹಗಳನ್ನು ಕುರಿತ ಓದುಗರ ಚರ್ಚೆಗಳನ್ನು 'ಅನಿಕೇತನ' ಸ್ವಾಗತಿಸುತ್ತದೆ.

ವಿಮರ್ಶೆ ಏನು ಮಾಡಬೇಕು, ಏನು ಮಾಡಬಲ್ಲದು ಹಾಗೂ ಏನು ಮಾಡುತ್ತದೆ ಎಂಬುದನ್ನು ಧ್ಯಾನಿಸಿ, ವ್ಯಾಖ್ಯಾನಿಸಿ ನಿರಂತರ ಚರ್ಚೆಗೆ ಗುರಿಪಡಿಸಿದವರಲ್ಲಿ ಭಾರತದ ರಾಜಶೇಖರ, ಇಟಲಿಯ ಕ್ರೋಸೆ, ಮತ್ತು ಜರ್ಮನಿಯ ಕಾಂಟ್, ಇಂಗ್ಲೆಂಡಿನ ಮ್ಯಾಥ್ಯೂ ಆರ್ನಾಲ್ಡ್ ಮತ್ತು ಐ. ಎ. ರಿಚರ್ಡ್ಸ್, ಫ್ರಾನ್ಸಿನ ರೋಲಾಂಡ್ ಬಾರ್ಥ್, ಕೆನಡಾದ ನಾರ್ಥ್‌ರಾಪ್ ಫ್ರೈ ಮತ್ತು ಅಮೆರಿಕಾದ ಸೂಸಾನ್ ಲ್ಯಾಂಗರ್ ಮುಖ್ಯರು. ಇಂಗ್ಲಿಷ್ ಪರಂಪರೆಯಲ್ಲಿ ವಿಮರ್ಶೆಯ ಕಾರ್ಯ ಸಾಹಿತ್ಯ ಚಿಂತನೆಯ ಒಂದು ಮುಖ್ಯ ಭಾಗವಾಗಿ ಹೋಗಿದೆ. ಹತ್ತೊಂಭತ್ತನೆಯ ಶತಮಾನದ ಅನೇಕ ಬರಹಗಾರರು ವಿಮರ್ಶೆಯ ಕಾರ್ಯದ ಬಗ್ಗೆ ಆಳವಾಗಿ ಚಿಂತಿಸಿದ್ದಾರೆ. ಆರ್ನಾಲ್ಡ್‌ನಿಂದ ನಮ್ಮ ಸಮಕಾಲೀನ ಟೆರ್ರಿ ಈಗಲ್‌ಟನ್‌ನವರೆಗೆ ಈ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇದರಿಂದ ಈ ಎಲ್ಲರ ಚಿಂತನೆಗಳನ್ನು ಒಗ್ಗೂಡಿಸಿ ಭಾರತದ ಸಂದರ್ಭದಲ್ಲಿ ವಿಮರ್ಶೆಯ ಕಾರ್ಯ ಕುರಿತು ಒಂದು ಸಿದ್ಧಾಂತವನ್ನು ರೂಪಿಸಲು ಪ್ರಯತ್ನಿಸಬಹುದು. ಆದರೆ ವಿಮರ್ಶೆ ಒಂದು ಸಂಸ್ಕೃತಿಯ - ಅದಕ್ಕಿಂತ ಮುಖ್ಯವಾಗಿ ಸಾಹಿತ್ಯ ಸಂಸ್ಕೃತಿಯ-ಉಪ ಅಂಗವಾಗಿರುವುದರಿಂದ ಈ ಬಗ್ಗೆ ಸಿದ್ಧ ಉತ್ತರಗಳ ಚೌಕಟ್ಟಿನಲ್ಲಿ ಯೋಚಿಸುವುದು ಅಷ್ಟೇನೂ ಪ್ರಯೋಜನಕಾರಿಯಲ್ಲ. ಸಾಹಿತ್ಯ ವಿಮರ್ಶೆ ಒಂದು ಸಿದ್ಧಾಂತವಾಗುವ ಯತ್ನದಲ್ಲಿ ಅಮೂರ್ತದ ಕಡೆಗೆ ವಾಲಿದರೂ ಅದರ ಅಮೂರ್ತತೆ ಗಣಿತಶಾಸ್ತ್ರದ ಸೂತ್ರಗಳಿಗಿಂತ ಭಿನ್ನವಾದದ್ದು. ಗಣಿತಶಾಸ್ತ್ರದ ಸೂತ್ರಗಳು ಸಾರ್ವತ್ರಿಕ ಬೆಲೆಯುಳ್ಳವಾದರೆ, ವಿಮರ್ಶೆಯ ಸಿದ್ಧಾಂತಗಳು ಕಾಲದೇಶಗಳ ಮಿತಿಯುಳ್ಳವು. ಒಂದು ಕಾಲಘಟ್ಟ ಹಾಗೂ ಒಂದು

ಸಂಸ್ಕೃತಿಯ ಸಂದರ್ಭದಲ್ಲಿನ ವಿಮರ್ಶೆಯ ಕಾರ್ಯ ಮತ್ತೊಂದು ಸಂಸ್ಕೃತಿ ಮತ್ತು ಕಾಲಘಟ್ಟಗಳಲ್ಲಿ ಬೇರೆಯೇ ಆಗಿರುತ್ತದೆ.

ಈ ಮೇಲಿನ ಅಂಶಗಳನ್ನು ಗ್ರಹಿಸಲು ಬಿ. ಎಸ್. ಮರ್ಡೇಕರ್ ಅವರ ಪ್ರಬಂಧ "ಸೌಂದರ್ಯ ಮೀಮಾಂಸೆಯ ಸ್ವರೂಪ" ತುಂಬಾ ಉಪಯುಕ್ತ. ಮರಾಠಿಯ ಪ್ರಭಾವಶಾಲಿ ವಿಮರ್ಶಕರಾದ ಮರ್ಡೇಕರ್ ಅವರ ವಾದ ಹೀಗಿದೆ : ಸುಂದರವಾದ ವಸ್ತುವನ್ನು ಎಂದೂ ನೋಡದವನೊಬ್ಬ, ಇದು ಸುಂದರವಾಗಿದೆ ಎಂದರೆ ಆತನ ಮಾತು ಸೌಂದರ್ಯಪ್ರಜ್ಞೆಯುಳ್ಳವನೊಬ್ಬನ ಅಂಥಹದೇ ಹೇಳಿಕೆಗೆ ಸಾಟಿಯಾಗಲಾರದು. ಈ ಇಬ್ಬರೂ 'X' ಎಂಬುದು ಸುಂದರವಾಗಿದೆ ಎಂದಿದ್ದಾರೆ, ನಿಜ. ಆದರೆ ಮೊದಲನೆಯವನ ಮಾತು ಕೇವಲ ಭಾಷಾ ಪ್ರಯೋಗ ಮಾತ್ರವಾಗಿದ್ದರೆ, ಎರಡನೆಯವನ ಮಾತು ಸೌಂದರ್ಯಮೀಮಾಂಸೆಯಾಗಿರುತ್ತದೆ. ಅಂದರೆ ಒಂದು ಸೂತ್ರ ಎರಡು ಭಿನ್ನ ಸಂದರ್ಭಗಳಲ್ಲಿ ಉಪಯೋಗಿಸಲ್ಪಟ್ಟಾಗ ಅದು ಒಂದೇ ಕಾರ್ಯವನ್ನು ಮಾಡುತ್ತಿರುವುದಿಲ್ಲ ಎಂದಾಯಿತು.

ಸಾಹಿತ್ಯ ಸಿದ್ಧಾಂತಗಳು ಶಾಶ್ವತ ಸತ್ಯಗಳ ಹಾಗೂ ಸೌಂದರ್ಯಗಳನ್ನು ಕುರಿತ ಗ್ರಹಿಕೆಗಳಲ್ಲ. ಅವು ಒಬ್ಬ ಸಾಹಿತ್ಯ ಪ್ರವಾದಿಯ ಅನುಭವಗಳಲ್ಲ. ಆದರೆ ಅವು ಭಾಷಾ ನಿರ್ಮಿತಿಗಳು. ಬರಹಗಾರರು ಹಾಗೂ ವಿದ್ಯಾರ್ಥಿ ಸಮೂಹಗಳು ನಿರ್ಮಿಸಿದಂಥವುಗಳು. ಇವು ಸಾಹಿತ್ಯ ನಿರ್ಮಾಣದಿಂದ ಸಂಪೂರ್ಣ ಬೇರೆಯಾಗಿ ಹೊರಹೊಮ್ಮಿದವುಗಳಲ್ಲ. ಉದಾಹರಣೆಗೆ ನಮ್ಮ ಸಮಕಾಲೀನರಲ್ಲಿ ಸಾಮಾನ್ಯವಾಗಿ ಯಾರೂ ಕಾವ್ಯವು ಪ್ರಾಸಬದ್ಧವಾಗಿರಬೇಕೆಂದಾಗಲೀ, ನಾಟಕಗಳು ಸೂತ್ರಧಾರರನ್ನು ಒಳಗೊಂಡಿರಬೇಕೆಂದಾಗಲೀ ಬಯಸುವುದಿಲ್ಲ. ಆದರೆ ಪುರಾತನ ಕಾಲದ ಕಾವ್ಯಮೀಮಾಂಸೆ ಈ ತತ್ವಗಳನ್ನು ಮುಖ್ಯ ಆಧಾರವನ್ನಾಗಿ ಸ್ವೀಕರಿಸಿತ್ತು. ಈಚಿನ ಸಿದ್ಧಾಂತಗಳಲ್ಲಿ ಲಕಾನ್ ಬಳಸುವ ರೀತಿಯ ಫ್ರಾಯ್ಡನ ಮನೋವಿಶ್ಲೇಷಣೆಯಲ್ಲಿ ಬರಹಗಾರನ ಪ್ರಜ್ಞೆ ಪಠ್ಯದ ಒಂದು ಭಾಗವಾಗಿ ಸ್ವೀಕೃತವಾಗಿರುತ್ತದೆ. ಭರತನ ರಸ ಸಿದ್ಧಾಂತದಲ್ಲಾಗಲೀ, ಅರಿಸ್ಟಾಟಲ್‌ನ ಅನುಕರಣ ಸಿದ್ಧಾಂತದಲ್ಲಾಗಲೀ, ಕೃತಿಕಾರನ ಪ್ರಜ್ಞೆಯ ಬಗೆಗಿನ ಸುಳಿವೂ ಇಲ್ಲ. ಯಾವುದೇ ಸಾಹಿತ್ಯ ಸಿದ್ಧಾಂತ ತಾನು ವಿಮರ್ಶಿಸುವ ಸಾಹಿತ್ಯಕ್ಕೆ ಪ್ರಸ್ತುತವಾಗಿರುವ ಮಟ್ಟಿಗೆ ಮಾತ್ರ ಬೆಲೆಯುಳ್ಳದ್ದಾಗಿರುತ್ತದೆ. ಒಂದು ಸಮುದಾಯ ತನ್ನ ಭಾಷೆಯ ಪರಿಧಿಯೊಳಗೆ ತನ್ನ ಹುಟ್ಟು ಹಾಗೂ ಬೆಳವಣಿಗೆಯನ್ನು ಕಂಡುಕೊಳ್ಳುತ್ತದೆ. ಜೊತೆಗೇ ತನ್ನ ಸೃಜನಶೀಲತೆಯಿಂದ ಹಾಗೂ ಹೊಸ ಇಂದ್ರಿಯಾನುಭವಗಳ ಮುಕ್ತ ಸ್ವೀಕಾರದಿಂದ ತನ್ನ ಭಾಷೆಯನ್ನು ಶ್ರೀಮಂತಗೊಳಿಸುತ್ತಿರುತ್ತದೆ.

ಪ್ರಜ್ಞೆಯ ಭಾಷೆಯು ಬೆಳೆಯುತ್ತಲೇ, ತನ್ನ ಸ್ವ-ವಿಮರ್ಶೆಗಾಗಿ Meta language ಅನ್ನೂ ಸೃಷ್ಟಿಸಿಕೊಳ್ಳುತ್ತದೆ. ವಿಮರ್ಶಾ ಪ್ರವೃತ್ತಿಯ ಮೂಲವಿರುವುದು ಇಲ್ಲೇ.

ಈ ವಿಮರ್ಶಾ ಪ್ರವೃತ್ತಿ ಒಂದು ಸಮುದಾಯದ ಸಮಾನ ಮನಸ್ಕ ಓದುಗರು ಮತ್ತು ಕೇಳುಗರಲ್ಲಿ ಸಾಹಿತ್ಯ ಸಂಪ್ರದಾಯದ ಸಂಕೀರ್ಣ ಸಂಬಂಧಗಳನ್ನು ಮತ್ತವರ ಗ್ರಹಿಕೆಯನ್ನು ಸಾಧ್ಯಗೊಳಿಸುತ್ತದೆ. ಈ ರೂಢಸ್ಥ ಸಾಹಿತ್ಯ ಸಂಪ್ರದಾಯಗಳಿಂದ ಹುಟ್ಟಿದ ಅಮೂರ್ತ ಪರಿಕಲ್ಪನೆಗಳ ಘೋಷಿತ ವ್ಯಾಖ್ಯಾನವೇ 'ಸಿದ್ಧಾಂತ'ವಾಗುತ್ತದೆ. ಆದ್ದರಿಂದ ಸಾಹಿತ್ಯ ಸಿದ್ಧಾಂತವು ಸಾಹಿತ್ಯದ ವ್ಯಾಕರಣದ ಘೋಷಿತ ರೂಪ ಅಥವಾ ವ್ಯಾಖ್ಯೆಯಾಗಿರುತ್ತದೆ, ಹಾಗೂ ಒಂದು ಸಿದ್ಧಾಂತದ ತಾತ್ವಿಕ ಹಾಗೂ ತಾರ್ಕಿಕ ನೆಲೆಗಟ್ಟುಗಳು ಸಂಬಂಧಪಟ್ಟ ಸಾಹಿತ್ಯದ ಭಾಷಿಕ ಮತ್ತು ಸೌಂದರ್ಯಾತ್ಮಕ ಸಂಪ್ರದಾಯಗಳ ಮೇಲೆ ಅವಲಂಬಿತವಾಗಿರುತ್ತವೆ. ಪ್ರತಿಯೊಂದು ಸಾಹಿತ್ಯ ಸಿದ್ಧಾಂತವೂ ಅದರ ಒಟ್ಟು ಭಾಷಿಕ ಸಾಹಿತ್ಯ ಮತ್ತು ಸಾಂಸ್ಕೃತಿಕ ಒತ್ತಡಗಳ ಸಂದರ್ಭದಲ್ಲಿ ಮಾತ್ರವೇ ರೂಪುಗೊಳ್ಳುತ್ತದೆ. ಈ ವಾದದ ತಿರುಳು ಇದು. ಎರಡು ಸಂಸ್ಕೃತಿಗಳಲ್ಲಿ ಅಥವಾ ಕಾಲಘಟ್ಟಗಳಲ್ಲಿ ವಿಮರ್ಶೆಯ ಕಾರ್ಯದ ಸ್ವರೂಪ ಒಂದೇ ಆಗಿರುವುದಿಲ್ಲ. ಇದನ್ನು ಮತ್ತಷ್ಟು ವಿಸ್ತೃತಗೊಳಿಸಿ ಹೇಳುವುದಾದರೆ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಮತ್ತು ಕಾಲಘಟ್ಟದಲ್ಲಿ ಕೂಡ ಎಲ್ಲಾ ವಿಮರ್ಶೆಯ ಗುರಿ ಹಾಗೂ ದಿಕ್ಕು ಒಂದೇ ಆಗಿರುವುದಿಲ್ಲ. ಯಾವುದೇ ಸಮಾಜದಲ್ಲಿ ಮೂಲತಃ ಸಾಹಿತ್ಯಿಕ ಮತ್ತು ಅಸಾಹಿತ್ಯಿಕ ಎಂಬುದರ ನಡುವಿನ ಭೇದದ ಬಗ್ಗೆ ಕೆಲವು ಕಲ್ಪನೆಗಳಿರುತ್ತವೆ. ಇನ್ನೂ ಖಚಿತವಾಗಿ 'ಸಾಹಿತ್ಯಿಕ' ಎನ್ನಬಹುದಾದ ಮತ್ತು 'ಅಸಾಹಿತ್ಯಿಕ' ಎನ್ನಬಹುದಾದ ಸಾಹಿತ್ಯದ ಬಗ್ಗೆಯೂ ಇಂತಹ ಕಲ್ಪನೆಗಳಿರುತ್ತವೆ.

ಸಾಹಿತ್ಯಿಕ ಸಾಹಿತ್ಯವೆಂಬುದು ಸಾಮಾನ್ಯವಾಗಿ ಒಂದು ವಯೋಮಿತಿಯೊಳಗಿನ ಮತ್ತು ಮುಖ್ಯವಾಗಿ ಆರ್ಥಿಕವಾಗಿ ಬಲಿಷ್ಠವಾದ ವರ್ಗ ರಚಿಸುವಂಥದ್ದೂ, ಬಳಸುವಂಥದ್ದೂ ಆಗಿರುತ್ತದೆ. ಆದ್ದರಿಂದಲೇ ಮಕ್ಕಳಿಂದ ಹಾಗೂ ಮಕ್ಕಳಿಗಾಗಿಯೇ ಇರುವ ಸಾಹಿತ್ಯ 'ಪ್ರಬುದ್ಧ' ಸಾಹಿತ್ಯದೊಡನೆ ಹೋಲಿಸಿದಾಗ ಸುಂದರ ಹಾಗೂ ಸಾಹಿತ್ಯಿಕ ಎಂದು ಪರಿಗಣಿತವಾಗುವುದಿಲ್ಲ. ಈ ಎರಡೂ ಪ್ರಭೇದಗಳನ್ನು ನೋಡುವ ಕ್ರಮದಲ್ಲಿ ವಿಮರ್ಶೆಯ ಪರಿಕಲ್ಪನೆಗಳು ಮತ್ತು ಮಾನದಂಡಗಳು ಬೇರೆ ಬೇರೆ ರೀತಿಯದ್ದಾಗಿರುತ್ತವೆ. ಹಾಗೆಯೇ ಪ್ರಧಾನಧಾರೆಯ ಸಾಹಿತ್ಯ ಮತ್ತು ಮಾರ್ಜಿನಲ್ ಸಾಹಿತ್ಯಗಳ ನಡುವಿನ ಭೇದವೂ ಇದೆ. ವೈಜ್ಞಾನಿಕ ಕಾದಂಬರಿ, ಜನಪ್ರಿಯ ಹಾಡುಗಳು, ಪತ್ತೇದಾರಿ ಕಾದಂಬರಿ ಮುಂತಾದ ಪ್ರಕಾರಗಳು ಮಾರ್ಜಿನಲ್ ಸಾಹಿತ್ಯವೆಂದು ಪರಿಗಣಿತವಾಗುತ್ತವೆ. ಭಾರತೀಯ ಸಂದರ್ಭದಲ್ಲಿ ಮತ್ತೊಂದು ರೀತಿಯ 'ಒತ್ತರಿಸುವಿಕೆ' (Marginalisation) ಜಾತಿ ಪದ್ಧತಿಯಿಂದಾಗಿ ಉಂಟಾಗಿದೆ. ಕೆಳವರ್ಗಗಳಿಂದ ಸೃಷ್ಟಿಯಾದ ಸಾಹಿತ್ಯಿಕ ಕಲಾತ್ಮಕತೆ ಮೇಲುಜಾತಿಯ ವಿಮರ್ಶಕರ ಗ್ರಹಿಕೆಯಲ್ಲಿ ಕೆಳಮಟ್ಟದ್ದಾಗಿರುತ್ತದೆ. ಇಂತಹ ಸಮಾಜ ಶಾಸ್ತ್ರೀಯ ನೆಲೆಯುಳ್ಳ, ವಿಮರ್ಶೆಯೊಳಗಿನ ವ್ಯತ್ಯಾಸಗಳ ಜೊತೆಗೇ, ವಿಮರ್ಶಕನ ಆಂತರಿಕ ಚೇತನಕ್ಕೆ ಸಂಬಂಧಿಸಿದ ಅಂಶಗಳೂ ಇರುತ್ತವೆ. ಹೀಗಾಗಿ ಒಂದು ಬಗೆಯ ವಿಮರ್ಶೆಯಂತೂ ವಿಮರ್ಶಕನ

ಸ್ವರಕ್ಷಣೆಯಲ್ಲದೆ ಬೇರೇನೂ ಆಗಿರುವುದಿಲ್ಲ. ವರ್ಡ್ಸ್‌ವರ್ತ್‌ನ "ಲಿರಿಕಲ್ ಬ್ಯಾಲಡ್ಸ್" ಮತ್ತು ಪಿ. ಲಾಲ್ ಅವರ "ಆಂಥಾಲಜಿ ಅಂಡ್ ಕ್ರೆಡೋ" ಕೃತಿಗಳ ಮುನ್ನುಡಿಗಳು ಈ ಬಗೆಯ ವಿಮರ್ಶೆಯ ಮಾದರಿಗಳು. ಈ ಎರಡೂ ಸಂದರ್ಭಗಳಲ್ಲಿ ಕವಿಗಳಿಬ್ಬರೂ ತಮ್ಮ ಕಾವ್ಯ ಹಿಂದಿನವರ ಕಾವ್ಯಕ್ಕಿಂತ ಉತ್ತಮ ಎಂಬುದನ್ನು ಸ್ಥಾಪಿಸಲು ಹೊರಟು ಈ ಉದ್ದೇಶಕ್ಕೆ ಪೂರಕವಾದ ವಿಮರ್ಶಾ ಪರಿಕಲ್ಪನೆಗಳನ್ನು ಮಾತ್ರ ಸಮರ್ಥಿಸಿದ್ದಾರೆ.

ಇದಕ್ಕಿಂತ ಭಿನ್ನವಾದ ವಿಮರ್ಶೆಯೆಂದರೆ ಈಗಿನ ಜೀವಂತ ಸಾಹಿತ್ಯ ಪ್ರಯೋಗಗಳ ಜೊತೆ ಯಾವ ಸಂಬಂಧವೂ ಇಲ್ಲದೆ ಹಿಂದಿನ ಯಾವುದೋ ವಿಮರ್ಶಾ ಸಿದ್ಧಾಂತದ ಆಧಾರದ ಮೇಲೆ ನಿರ್ಮಿತವಾದದ್ದು. ಬಿ. ಆರ್. ಪಾಟಂಕರ್ ಅವರ ಮರಾಠಿ ಕೃತಿ "ಕಾಂಟನ ಸೌಂದರ್ಯ ಮೀಮಾಂಸೆ" ಈ ಬಗೆಯ ವಿಮರ್ಶೆಗೆ ಮಾದರಿ. ಸಾಮಾನ್ಯವಾಗಿ ತತ್ವಶಾಸ್ತ್ರದ ಉಪ ಅಂಗವಾದ ಸೌಂದರ್ಯಮೀಮಾಂಸೆ ಈ ಹಾದಿ ಹಿಡಿಯುತ್ತದೆ. ಪ್ರಾಚೀನ ಭಾರತದ ಕಾವ್ಯ ಮೀಮಾಂಸೆಯಲ್ಲಿ ಅಭಿನವಗುಪ್ತನ ಮಹತ್ವದ ಕೃತಿ "ಸೌಂದರ್ಯ ಮೀಮಾಂಸೆ" ಸಿದ್ಧಾಂತಾಧಾರಿತ ಸೌಂದರ್ಯಮೀಮಾಂಸೆಗೊಂದು ಒಳ್ಳೆಯ ಉದಾಹರಣೆ. ಇದಕ್ಕಿಂತ ಭಿನ್ನವಾದ ಇನ್ನೊಂದು ರೀತಿಯ ವಿಮರ್ಶೆ, ವಿಮರ್ಶಕನೊಬ್ಬ ಅನೇಕ ಸಾಹಿತ್ಯ ಕೃತಿಗಳ ಅನುಸಂಧಾನದಲ್ಲಿ ಪಡೆದ ನೇರ ಹಾಗೂ ಖಾಸಗೀ ಅನುಭವದಿಂದ ಹುಟ್ಟಿ ದಂತಹದ್ದಾಗಿರುತ್ತದೆ. ಭರತ ಮತ್ತು ಅರಿಸ್ಟಾಟಲ್ ತಮ್ಮ ಕಾಲದ ರಂಗಸಂಪ್ರದಾಯ ಗಳನ್ನು ಶೋಧಿಸಿ ವಿಮರ್ಶಿಸಿದ್ದು ಈ ರೀತಿಯಲ್ಲಿ. ಹೀಗೆ ವಿಮರ್ಶೆ ಎನ್ನುವುದು ಒಂದು ಅಖಂಡ ಬೌದ್ಧಿಕ ಕ್ರಿಯೆಯಲ್ಲ. ಅದು ಅನೇಕ ಸ್ತರಗಳ, ಅರಿವುಗಳ ಬಹುಮುಖೀ ಕ್ರಿಯೆ. ಆದ್ದರಿಂದ ವಿಮರ್ಶೆಯ ಏಕಮಾತ್ರ ಕಾರ್ಯ ಎಂಬುದರ ಬಗ್ಗೆ ಮಾತನಾಡುವುದು ಅಷ್ಟು ಸೂಕ್ತವಲ್ಲ. ಎಲ್ಲಾ ಕಾಲದಲ್ಲೂ, ಎಲ್ಲಾ ಸಂಸ್ಕೃತಿಗಳಿಗೂ ಅನ್ವಯಿಸುವ ಏಕರೂಪೀ ವಿಮರ್ಶೆ ಹೇಗೆ ಅಸಾಧುವೋ ಹಾಗೆಯೇ ವಿಮರ್ಶೆಯ ಕಾರ್ಯವನ್ನೂ ಒಂದೇ ಒಂದು 'ಏಕ'ಕ್ಕೆ ಸೀಮಿತಗೊಳಿಸುವುದು ಸೂಕ್ತವಲ್ಲ. ಈ ಹಂತದಲ್ಲಿ ಸಾಹಿತ್ಯ ವಿಮರ್ಶೆಗೆ ಕಾರ್ಯವೆಂಬುದೊಂದು ಇದೆಯೇ ಎಂಬ ಪ್ರಶ್ನೆ ಚರ್ಚೆಯನ್ನು ಮತ್ತಷ್ಟು ವಿಶಾಲ ಗೊಳಿಸಲೆತ್ನಿಸುತ್ತದೆ. ಒಂದು ದೃಷ್ಟಾಂತದ ಮೂಲಕ ಈ ಪ್ರಶ್ನೆಯನ್ನು ಕೈಗೆತ್ತಿಕೊಳ್ಳಬಹುದು. ಒಂದು ಕಾಲದಲ್ಲಿ ಜನರು ಕ್ರೀಡೆಗಳಲ್ಲಿ ನೇರವಾಗಿ ಪಾಲ್ಗೊಳ್ಳುತ್ತಿದ್ದರು, ಅಥವಾ ಇತರರು ಪಾಲ್ಗೊಂಡ ಕ್ರೀಡೆಗಳನ್ನು ನೋಡಿ ಆನಂದಿಸುತ್ತಿದ್ದರು. ಈಗ ದೂರಸಂಪರ್ಕ ತಂತ್ರಜ್ಞಾನದಿಂದಾಗಿ ಟೆಲಿವಿಷನ್ ಮತ್ತು ರೇಡಿಯೋ ಮುಖಾಂತರ ನಮ್ಮನ್ನು ತಲುಪುವ ವೀಕ್ಷಕ ವಿವರಣೆಯು ಅನಿವಾರ್ಯವೆಂಬಂತಾಗಿದೆ. ಇಂದು ಯಾರಿಗೂ ಕ್ರಿಕೆಟ್ ಕಾಮೆಂಟರಿ ಎನ್ನುವುದು ಅಚ್ಚರಿ ಹುಟ್ಟಿಸುವುದಿಲ್ಲ. ಪತ್ರಿಕೆಗಳು ಮತ್ತು ಇತರ ಸಮೂಹ ಮಾಧ್ಯಮಗಳಲ್ಲಿ ನಾವು ಕಾಣುವ ಕ್ರೀಡಾ ವರದಿಗಾರರ ಮತ್ತು ವ್ಯಾಖ್ಯಾನಕಾರರ ಪರಿಣತಿ, ಅವರ ಮಾತಿನ

ಪಾರಿಭಾಷಿಕತೆ ಮತ್ತು ಅಲ್ಲಿ ಕಾಣುವ ಅಂತರ್ಗತ ವಿಶ್ವಾಸ ಇವೆಲ್ಲವೂ ಒಟ್ಟುಗೂಡಿ ವಿವರಣಕಾರನೊಬ್ಬ ತನ್ನ ಕಾರ್ಯದಿಂದ ಕ್ರೀಡಾಪಟುವಿನ ಆಟ ಉತ್ತಮಗೊಳ್ಳುವಲ್ಲಿ ಅಥವಾ ಸಂಬಂಧಪಟ್ಟ ಕ್ರೀಡೆಗಳು ಬೆಳೆಯುವಲ್ಲಿ ಸಹಾಯವಾಗುವುದನ್ನು ಗಮನಿಸಿದರೆ ವೀಕ್ಷಕ ವಿವರಣೆಯ ಪಾತ್ರ ಗಮನಾರ್ಹವಾದದ್ದು ಎಂದು ನಮಗನ್ನಿಸುತ್ತದೆ. ಆದರೆ ವಾಸ್ತವವಾಗಿ ವೀಕ್ಷಕ ವಿವರಣೆಯ ಮೂಲಕ ಭಾಷೆಯ ಪುನರ್‌ಸೃಷ್ಟಿಯ ತಂತ್ರಜ್ಞಾನವೊಂದು ತನ್ನನ್ನು ತಾನು ಸಮಾಜಕ್ಕೆ ಮಾರಿಕೊಳ್ಳುತ್ತದೆ. ಒಂದು ವೇಳೆ ಈ ತಂತ್ರಜ್ಞಾನ ಇಲ್ಲದಿದ್ದರೂ ಕ್ರೀಡೆಯೇನೂ ನಿಲ್ಲುವುದಿಲ್ಲ. ಒಂದು ದೃಷ್ಟಿಯಿಂದ ಸಾಹಿತ್ಯ ವಿಮರ್ಶೆಯೂ ವೀಕ್ಷಕ ವಿವರಣೆಯಂತೆಯೇ. ಬರಹಗಾರರು ಭಾಷೆಯೊಂದಿಗೆ ಆಡುವ ಆಟವನ್ನು ಓದುಗರು ಓದಿ ಆನಂದಿಸುತ್ತಾರೆ ಅಥವಾ ಕೆಲವೊಮ್ಮೆ ಆನಂದಿಸುವುದಿಲ್ಲ. ಆದರೆ ವಿವರಿಸುವ, ವಿಶ್ಲೇಷಿಸುವ, ಬೆಲೆ ಕಟ್ಟುವ ಅಥವಾ ಸೈದ್ಧಾಂತೀಕರಿಸುವ ಜವಾಬ್ದಾರಿಯನ್ನು ವಿಮರ್ಶಕರು ಸ್ವಯಂ ಪ್ರೇರಣೆಯಿಂದ ಹೊತ್ತುಕೊಳ್ಳುತ್ತಾರೆ. ಫ್ರೆಂಚ್ ವಿಮರ್ಶಕ ರೋಲಾಂಡ್ ಬಾರ್ಥ್ ಹೇಳುವಂತೆ ವಿಮರ್ಶೆ ಏನನ್ನೂ ಅನಾವರಣಗೊಳಿಸುವುದಿಲ್ಲ. ಅದು ಒಂದು ಕೃತಿಯನ್ನು ಭಾಷೆಯಿಂದ ಮುಚ್ಚುತ್ತದಷ್ಟೇ. ಐ.ಎ. ರಿಚರ್ಡ್ಸ್ ಮತ್ತು ಇತರರು ಹೇಳುವಂತೆ ವಿಮರ್ಶೆಯ ಅರ್ಥಪೂರ್ಣತೆ ಅದರ ತರ್ಕಬದ್ಧತೆಗೆ ಸಂಬಂಧಿಸಿದುದಾಗಿದೆ. ಸತ್ಯ ಮತ್ತು ಅಸತ್ಯಗಳನ್ನು ಕುರಿತು ಅದು ಏನನ್ನು ಹೇಳದಿದ್ದರೂ ಅದರ ಹೇಳುವಿಕೆ ಮಾತ್ರ ತಾರ್ಕಿಕವಾಗಿ ಸಂಭವನೀಯ ಎನಿಸುವಂತಿರುತ್ತದೆ. ಈ ಎರಡು ಹೇಳಿಕೆಗಳಿಗೆ ಉತ್ತರವಾಗಿ ಸಾಹಿತ್ಯ ವಿಮರ್ಶೆಗೆ ತನ್ನದೇ ಆದ ಅರ್ಥ ಮತ್ತು ಸತ್ಯ ವ್ಯಾಪ್ತಿ ಇದೆ ಎಂಬುದನ್ನು ಸ್ಥಾಪಿಸ ಬಹುದಾದರೂ ಸಾಹಿತ್ಯ ವಿಮರ್ಶೆಯ ಮೂಲಭೂತ ಕ್ರಿಯೆಯೇ ನಿರರ್ಥಕ ಹಾಗೂ ವಿಮರ್ಶೆ ಎಂಬುದೊಂದು ಇರುವುದೇ ಅದರ ಇರುವಿಕೆಗೆ ಕಾರಣ (raison d'etre) ಎಂದು ವಾದಿಸಲೂ ಸಾಧ್ಯವಿದೆ. ಸಾಹಿತ್ಯ ವಿಮರ್ಶೆ ಸ್ವ-ವೈಭವೀಕರಣದ ಕ್ರಿಯೆಯಾಗಿದ್ದಲ್ಲಿ, ಪ್ರಸ್ತುತ ಸಂದರ್ಭದಲ್ಲಿ ಸಾಹಿತ್ಯ ವಿಮರ್ಶೆಗೆ ಇರುವ ಅತಿ ಪ್ರಾಮುಖ್ಯತೆಗೆ ಕಾರಣವೇನು? ವೈಚಾರಿಕ ಆಕೃತಿಗಳು ಪ್ರಾಮುಖ್ಯತೆಯನ್ನು ಗಳಿಸಿ ಕೊಳ್ಳುವುದಾಗಲೀ ಅಥವಾ ಪ್ರಾಮುಖ್ಯತೆ ಕಳೆದುಕೊಳ್ಳುವುದಾಗಲೀ ಸಂಪೂರ್ಣ ಹೊರಗಿನ ಕಾರಣಗಳಿಂದಾಗಿಯೇ. ಸಾಹಿತ್ಯ ವಿಮರ್ಶೆಗಿರುವ ಇಂದಿನ ಪ್ರಾಮುಖ್ಯತೆಗೆ ಕಾರಣಗಳು ನಮ್ಮ ಚರಿತ್ರೆಯಲ್ಲಿವೆ. ಸ್ಪಷ್ಟವಾಗಿ ಈ ಪ್ರಾಧಾನ್ಯತೆ ಭಾರತದ ವಸಾಹತೀಕರಣದ ಸಂದರ್ಭದಲ್ಲಿ ಹುಟ್ಟಿದ್ದು.

ಬ್ರಿಟಿಷರು ಸಾಹಿತ್ಯಾಭ್ಯಾಸವನ್ನು ಭಾರತೀಯ ವಿದ್ಯಾಭ್ಯಾಸದ ಒಂದು ಅಗತ್ಯವನ್ನಾಗಿಸಿದರು. ಅವರ ಉದ್ದೇಶ ವಸಾಹತೀಕರಣಗೊಂಡ ಜನರ ಮನಸ್ಸಿನಲ್ಲಿ ತಮ್ಮ ಬ್ರಿಟಿಷ್ ಸಂಸ್ಕೃತಿಯ ಹಿರಿಮೆಯನ್ನು ಮೆರೆಯುವುದಾಗಿತ್ತು. ಭಾರತೀಯರಲ್ಲಿ ಯಾವುದೇ ಗಮನಾರ್ಹ ಸೆಕ್ಯುಲರ್ ಸಾಹಿತ್ಯವಾಗಲೀ, ವೈಜ್ಞಾನಿಕ ಸಾಹಿತ್ಯವಾಗಲೀ

ಇಲ್ಲವೆಂಬ ತನ್ನ ನಿಲುವನ್ನು ಮೆಕಾಲೆ ಸ್ಪಷ್ಟವಾಗಿ ಮಂಡಿಸಿದ್ದ. ಮೆಕಾಲೆಯ ಘೋಷಿತ ಉದ್ದೇಶ ಅಭಿಜಾತ ಇಂಗ್ಲಿಷ್ ಸಾಹಿತ್ಯದ ಅಧ್ಯಯನದ ಮೂಲಕ ಭಾರತೀಯರನ್ನು ನಾಗರೀಕಗೊಳಿಸುವುದಾಗಿತ್ತು. ಸಾಹಿತ್ಯದ ಅಧ್ಯಯನ ಸಾಂಸ್ಥೀಕರಣಗೊಂಡಾಕ್ಷಣ ಸರಳ ವ್ಯಾಖ್ಯಾನಗಳು, ವಿವರಣೆಗಳು ಮತ್ತು ಗೈಡ್‌ಗಳ ಅಗತ್ಯ ಕಂಡುಬರುತ್ತದೆ. ಇದರ ಬೆನ್ನ ಹಿಂದೆಯೇ ಅಭಿರುಚಿಯ ಸಾಮಾನ್ಯೀಕರಣದ ಪ್ರಕ್ರಿಯೆಯೂ ನಡೆಯುತ್ತಿರುತ್ತದೆ. ಹಾಗೆಯೇ ಸೌಂದರ್ಯದ ಬಗೆಗಿನ ಸಾಮಾನ್ಯ ಕಲ್ಪನೆಯೊಂದು ಜನ ಸಮೂಹದಲ್ಲಿ ರೂಪುಗೊಳ್ಳುತ್ತದೆ. ಮೆಕಾಲೆ ಇಂಗ್ಲಿಷ್ ಸಾಹಿತ್ಯವನ್ನು ಭಾರತದ ವಿದ್ಯಾಭ್ಯಾಸ ಪದ್ಧತಿಯಲ್ಲಿ ಸೇರಿಸಿದಾಗ ಇಂಗ್ಲೆಂಡಿನ ಶಾಲೆಗಳಲ್ಲಿ ಇಂಗ್ಲಿಷ್ ಸಾಹಿತ್ಯ ಆಗ ತಾನೇ ಪ್ರವೇಶ ಪಡೆದಿತ್ತು. ಅಲ್ಲಿನ ವಿಶ್ವವಿದ್ಯಾಲಯಗಳಲ್ಲಂತೂ ಈ ಶತಮಾನದ ಮೊದಲ ದಶಕಗಳಲ್ಲಷ್ಟೇ ಇಂಗ್ಲಿಷ್ ಸಾಹಿತ್ಯದ ಪ್ರವೇಶವಾಗಿತ್ತು. ಶಾಲೆಗಳಲ್ಲಿ ಸಹ ಬ್ರಿಟನ್ನಿನ ವಯಸ್ಕ ಕಾರ್ಮಿಕರಿಗೆ ಮಾತ್ರ ಸಾಹಿತ್ಯದ ಪಠ್ಯಕ್ರಮ ಮೀಸಲಾಗಿತ್ತು. ಇದರ ಉದ್ದೇಶ ಭಾರತದಲ್ಲೂ ಇಂಗ್ಲೆಂಡಿನಲ್ಲೂ ಒಂದೇ ಆಗಿತ್ತು. ಅನಾಗರೀಕರಲ್ಲಿರುವ ಹಾಗೂ ತಮ್ಮ ಆಳ್ವಿಕೆಯಲ್ಲಿರುವವರಲ್ಲಿ ಇರುವ ಅಪಾಯಕಾರೀ ಅಂಶಗಳನ್ನು ತೊಡೆದು ಹಾಕಿ ಅವರನ್ನು ನಾಗರೀಕಗೊಳಿಸುವುದು ಅವರ ಉದ್ದೇಶ. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಮುಕ್ತ ಅವಕಾಶಗಳ ದಾರಿಯಾಗಿ ಕಂಡಿತು. ಹಾಗೂ ಆರ್ಥಿಕ ಮೇಲ್ಚಲನೆಯ ಮತ್ತು ಸಂಸ್ಕೃತಿಯ ಸಂಕೇತವಾಯಿತು. ಇಂಗ್ಲಿಷ್ ಸಾಹಿತ್ಯದ ಪರಿಚಯ ಹಾಗೂ ಸಮಯಾನುಸಾರವಾಗಿ, ಸೂಕ್ತ ಸನ್ನಿವೇಶಗಳಲ್ಲಿ ಸ್ವಲ್ಪಮಟ್ಟಿಗಾದರೂ ಇಂಗ್ಲಿಷ್ ಕಾವ್ಯವನ್ನು ಉದ್ಧರಿಸುವ ಕಲೆ, ವ್ಯಕ್ತಿತ್ವದ ಅಪೇಕ್ಷಿತ ಭಾಗವಾದವು. ಆದ್ದರಿಂದ ಸಾಹಿತ್ಯದ ಬಗ್ಗೆ ಮಾತನಾಡುವ ಪರಿಣತಿ ವಸಾಹತೀಕೃತ ಭಾರತದ ಸಂದರ್ಭದಲ್ಲಿ ಸಾಮಾಜಿಕ ಅಧಿಕಾರವನ್ನು ಪಡೆದುಕೊಳ್ಳುವ ಮಾರ್ಗವಾಯಿತು. ಇನ್ನೊಂದೆಡೆ ಈ ಶತಮಾನದ ಆರಂಭದಲ್ಲಿ ಭಾರತದಲ್ಲಿ ಸಾಹಿತ್ಯವು ರಾಜಕೀಯ ಪ್ರತಿಭಟನೆಯ ಸಾಧನವಾಗಿ ಸ್ವಾತಂತ್ರ್ಯ ಚಳುವಳಿಯ ಬತ್ತಳಿಕೆಯಲ್ಲಿ ಒಂದು ಜನಪ್ರಿಯ ಅಸ್ತ್ರವಾಗಿ ರೂಪುಗೊಳ್ಳುತ್ತಿತ್ತು. ಇದರಿಂದ ಸಾಹಿತ್ಯ ಪರಿಣತಿಯು ನೈತಿಕ ಮೌಲ್ಯದ ಲೇಪನವನ್ನು ಪಡೆಯಿತು. ಮುದ್ರಣ ತಂತ್ರಜ್ಞಾನದ ಆಗಮನದ ಹಿನ್ನೆಲೆಯಲ್ಲಿ ಭಾರತದಲ್ಲಿ ಪ್ರಥಮ ಬಾರಿಗೆ ಸಾಹಿತ್ಯ ಬರವಣಿಗೆ ಮತ್ತು ಅದರ ಪ್ರಕಾಶನದ ಮೂಲಕ ಅಪಾರ ಕೀರ್ತಿ ಮತ್ತು ಒಂದು ರೀತಿಯ ಅಮರತ್ವ ಪಡೆಯುವುದು ಸಾಧ್ಯವಾಯಿತು. ಪ್ರಾಚೀನ ವಸಾಹತುಪೂರ್ವ ಭಾರತದಲ್ಲಿ ಶತಮಾನಗಳಿಂದಲೂ ಶಾಸ್ತ್ರ, ವೇದ ಮತ್ತು ಸಾಹಿತ್ಯಗಳ ಏಕಸ್ವಾಮ್ಯದ ಬಗೆಗೆ ವೈದಿಕ ಮತ್ತು ಅವೈದಿಕ ವರ್ಗಗಳ ನಡುವೆ ತೀವ್ರವಾದ ಕದನ ನಡೆಯುತ್ತಿತ್ತು. ಆದರೆ ಬ್ರಿಟಿಷರ ಆಡಳಿತದಲ್ಲಿ ವಿದ್ಯಾಸಂಸ್ಥೆಗಳ ಅಧಿಕಾರ ಬ್ರಾಹ್ಮಣ ವರ್ಗದ್ದಾಗಿತ್ತು. ಇಂತಹ ಸಂದರ್ಭದಲ್ಲಿ ಲಿಖಿತ ಸಾಹಿತ್ಯವನ್ನು ಸವಲತ್ತೀಕರಿಸುವುದು ಆ ಅಧಿಕಾರಸ್ಥ ವರ್ಗಕ್ಕೆ ರಾಜಕೀಯವಾಗಿ ಅನುಕೂಲಕರ

ಪಾದಂತಹುದಾಗಿತ್ತು. ಈ ಎಲ್ಲಾ ಕಾರಣದಿಂದಾಗಿ ಸಾಹಿತ್ಯ ವಿಮರ್ಶೆಯು ಭಾರತದಲ್ಲಿ ಕಳೆದ ನೂರೈವತ್ತು ವರ್ಷಗಳಲ್ಲಿ ಒಂದು ಜ್ಞಾನರೂಪವಾಗಿ ಉತ್ಪ್ರೇಕ್ಷಿತ ಬೆಲೆ ಪಡೆಯಿತು.

ಬ್ರಿಟನ್ ಹಾಗೂ ಯುರೋಪಿನ ಇತರ ವಸಾಹತುಶಾಹೀ ದೇಶಗಳಿಗೆ ಆಕಸ್ಮಿಕವಾಗಿ ಹುಟ್ಟಿದ ಒಂದು ಅರಿವೆಂದರೆ ಸಾಹಿತ್ಯ ವಿಮರ್ಶೆ ಕೂಡ ಇತರ ಕೈಗಾರಿಕಾ ಉತ್ಪನ್ನಗಳಂತೆ ಒಂದು ವ್ಯಾಪಾರೀ ವಸ್ತುವೆಂಬುದು ಹಾಗೂ ಈ ವಸ್ತುವಿಗೆ ತನ್ನ ವಸಾಹತುಗಳಲ್ಲಿ ವಿಶಾಲವಾದ ಸಿದ್ಧ ಮಾರುಕಟ್ಟೆ ಇದೆಯೆಂಬುದು. ಆದ್ದರಿಂದ ಮತ್ತು ಅಂದಿನಿಂದ ಪಶ್ಚಿಮದ ಸಾಂಸ್ಕೃತಿಕ ರಾಜಧಾನಿಗಳಲ್ಲಿ ಸಾಹಿತ್ಯ ವಿಮರ್ಶೆಯ ಉದ್ಯಮವೊಂದು ತೀವ್ರಗತಿಯಲ್ಲಿ ಬೆಳೆದಿದೆ. ಈ ಉದ್ಯಮಕ್ಕೆ ಇತರ ಸಂಸ್ಕೃತಿಗಳ ಸೌಂದರ್ಯಾತ್ಮಕ ಪರಿಕಲ್ಪನೆಗಳ ಬಗ್ಗೆ ಯಾವುದೇ ಗೌರವವಿಲ್ಲ. ಈ ವಿಮರ್ಶಾ ಉದ್ಯಮದ ಬೆನ್ನ ಹಿಂದೆ ಪಶ್ಚಿಮದ ಬಂಡವಾಳದ ಆಸರೆಯಿದೆ. ಹಾಗೂ ವಿದೇಶಗಳಲ್ಲಿ ಗ್ರಾಹಕರ ಸಿದ್ಧ ಮಾರುಕಟ್ಟೆ ಇದೆ. ಬದಲಾಗುತ್ತಿರುವ ಈಚಿನ ಸಂದರ್ಭದಲ್ಲಿ ಈ ವಿದೇಶೀ ಮಾರುಕಟ್ಟೆಗಳು ಕುಗ್ಗುತ್ತಿರುವುದರಿಂದ ಹೊಸ ವಾಸ್ತವಕ್ಕೆ ಹೊಂದುವಂತೆ ಯುರೋಪಿಯನ್ ಸರ್ಕಾರಗಳು ಸಾಹಿತ್ಯ ವಿಭಾಗಗಳಿಗೆ ಮೀಸಲಾದ ಹಣದಲ್ಲಿ ದೊಡ್ಡ ಕಡಿತಗಳನ್ನು ಜಾರಿಗೊಳಿಸುವುದರಿಂದ ಪ್ರಕಾಶಕರು ಈಗ ಮ್ಯಾನೇಜ್‌ಮೆಂಟ್ ಮತ್ತು ಕಂಪ್ಯೂಟರಾಧಾರಿತ ಕೃತಕ ಬುದ್ಧಿವಂತಿಕೆ ಯಂತಹ ಲಾಭದಾಯಕ ಕ್ಷೇತ್ರಗಳತ್ತ ಹೊರಳಿದ್ದಾರೆ.

ಆದರೆ ಎಲ್ಲಾ ಸಂಕಷ್ಟಗಳ ಮೂಲವೂ ವಸಾಹತು ಅನುಭವದಲ್ಲೇ ಇದೆಯೆಂದು ಇದರರ್ಥವಲ್ಲ. ಈ ಪರಿಸ್ಥಿತಿಗೆ ನಮ್ಮ ಕಾಣಿಕೆಯೂ ಇದೆ. ಕಳೆದ ಶತಮಾನದ ಮಧ್ಯಭಾಗದಲ್ಲಿ ಈ ಹೇರಿಕೆಯ ವಿಮರ್ಶೆ ನಮಗೆದುರಾದಾಗ ಭಾಷೆ ಮತ್ತು ಕಾವ್ಯದ ಬಗೆಗೆ ನಮ್ಮಲ್ಲಿ ಪಾರಂಪರಿಕವಾಗಿ ಉಳಿದುಕೊಂಡು ಬಂದಿದ್ದ ಗೌರವದಿಂದಾಗಿ ಇಂಗ್ಲಿಷ್ ಸಾಹಿತ್ಯ ಮತ್ತು ವಿಮರ್ಶೆಯನ್ನು ಹೆಚ್ಚು ಪ್ರತಿರೋಧವಿಲ್ಲದೆ ಸ್ವೀಕರಿಸಿದ್ದೆವು. ಪ್ರಾಚೀನ ಭಾರತದ ಕಾವ್ಯಮೀಮಾಂಸಕರಾದ ಭರತಮುನಿ, ಆನಂದವರ್ಧನ ಮತ್ತು ಅಭಿನವಗುಪ್ತರ ಬಗ್ಗೆ ನಮ್ಮಲ್ಲಿದ್ದ ಗುರುಭಾವನೆಯನ್ನೇ ನಾವು ಕಾರ್ಲೈಲ್, ರಸ್ಕಿನ್, ಆರ್ನಾಲ್ಡ್ ಮತ್ತು ಎಲಿಯಟ್ ಬಗೆಗೂ ತಳೆದೆವು. ವಾಸ್ತವವಾಗಿ ಇವರಲ್ಲಿ ಯಾರಿಗೂ ಭಾರತೀಯ ಸಂಸ್ಕೃತಿಯ ಬಗೆಗೆ ಆಸ್ಥೆ ಇರಲಿಲ್ಲ. ಅರ್ಥಶಾಸ್ತ್ರದ ಕಾರಣದಿಂದಾಗಿ ಗಾಂಧೀಜಿಯ ಮೆಚ್ಚುಗೆ ಗಳಿಸಿದ್ದ ರಸ್ಕಿನ್ ಭಾರತೀಯ ಕಲೆಯನ್ನು ಅರ್ಥಹೀನ ಮತ್ತು ಬರ್ಬರವೆಂದು ಭಾವಿಸಿದ್ದ. 'ವೇಸ್ಟ್‌ಲ್ಯಾಂಡ್' ಪದ್ಯದಲ್ಲಿ ಅಲ್ಪ ಸ್ವಲ್ಪ ಸಂಸ್ಕೃತ ಉಪಯೋಗಿಸಿದ್ದ ಎಲಿಯಟ್ ರಾಜಕಾರಣದಲ್ಲಿ ಪರಂಪರಾವಾದಿಯಾಗಿದ್ದವನು; ಸಾಮ್ರಾಜ್ಯಶಾಹಿಯನ್ನು ಬೆಂಬಲಿಸಿದ್ದವನು. ಭಾರತೀಯ ಭಾಷೆಗಳಲ್ಲಿನ ಸೃಜನಶೀಲ ಸಾಹಿತ್ಯ ದಿಟ್ಟ ವ್ಯಕ್ತಿವಿಶಿಷ್ಟತೆಯಿಂದ ಮತ್ತು ತೀವ್ರ ಸ್ವಾತಂತ್ರ್ಯಾಕಾಂಕ್ಷೆಯಿಂದ ತುಂಬಿತ್ತೆನ್ನುವ ಅಂಶ

ಗಾಲಿಬ್, ಟ್ಯಾಗೋರ್, ಇಕ್ಬಾಲ್, ಅರಬಿಂದೋ, ಪ್ರೇಮ್‌ಚಂದ್ ಹಾಗೂ ಕೇಶವಸುತ ಮೊದಲಾದವರ ಕೃತಿಗಳಲ್ಲಿ ಕಂಡುಬರುತ್ತದೆ. ಇದಕ್ಕೆ ವಿರುದ್ಧವಾಗಿ ಈ ಕಾಲದ ಸಾಹಿತ್ಯ ವಿಮರ್ಶೆ ಮಾತ್ರ ಎಪೊಲಿಟಿಕಲ್ ಆಗಿಯೇ ಉಳಿಯಿತು. ಸಾಹಿತ್ಯವನ್ನು ರಾಜಕೀಯದಿಂದ ದೂರವಿಡಬೇಕೆಂಬ ಸಿದ್ಧಾಂತವನ್ನು ಪ್ರಶ್ನಿಸದೆ ಒಪ್ಪಿಕೊಳ್ಳಲಾಯಿತು. ಈ ಶತಮಾನದ ಆರಂಭದಲ್ಲಿ ಭಾರತೀಯ ಭಾಷೆಗಳ ಸಂದರ್ಭದಲ್ಲಿ 'ಕಲೆಗಾಗಿ ಕಲೆಯೇ? ಜೀವನಕ್ಕಾಗಿ ಕಲೆಯೇ?' ಎಂಬ ಚರ್ಚೆ ಆರಂಭವಾಗಿತ್ತು. ಈ ಚರ್ಚೆಯ ಹಿಂದೆ ದೇಸೀ ನೆಲೆಗಳಿದ್ದರೂ ಅದರ ಬೌದ್ಧಿಕ ಆಕೃತಿಗಳನ್ನು ವಾಲ್ಟರ್ ಪೇಟರ್ ಮತ್ತು ಆಸ್ಕರ್ ವೈಲ್ಡ್‌ರಿಂದ ಎರವಲು ಪಡೆಯಲಾಗಿತ್ತು. ವಿಮರ್ಶೆಗೆ ಸಂಬಂಧಿಸಿದ ಇತರ ಎಲ್ಲಾ ಚರ್ಚೆಗಳ ಮೂಲವೂ ಪಾಶ್ಚಿಮಾತ್ಯ ಸಾಮಾಜಿಕ ಸನ್ನಿವೇಶ ಮತ್ತು ಪಶ್ಚಿಮದ ಸಾಹಿತ್ಯ ಚರಿತ್ರೆಗಳಲ್ಲಿತ್ತು.

ಹೀಗೆ ಮೂಲತಃ ಯುರೋಪ್ ಕೇಂದ್ರಿತವಾದ ಮತ್ತು ಅತಿ ಸಂಕುಚಿತವಾದ ಪರಿಕಲ್ಪನೆಗಳು ಇತರ ವಸಾಹತೀಕೃತ ಸಂಸ್ಕೃತಿಗಳಲ್ಲಾದಂತೆ ಭಾರತದಲ್ಲೂ ಸಾರ್ವಕಾಲಿಕ ಪರಿಕಲ್ಪನೆಗಳಾಗಿ ಸ್ವೀಕೃತಗೊಂಡವು. ಈ ಪ್ರಕ್ರಿಯೆಯ ಮುಂಚೂಣಿಯಲ್ಲಿದ್ದ ಸಾಮಾಜಿಕ ವರ್ಗಕ್ಕೆ ಯುರೋಪಿಯನ್ ಆಲೋಚನಾ ಕ್ರಮಗಳನ್ನು ಒಪ್ಪಿಕೊಳ್ಳುವುದರಲ್ಲಿ ತನ್ನದೇ ಆದ ಹಿತಾಸಕ್ತಿಯ ಪ್ರಶ್ನೆಯೂ ಇತ್ತು. ಆದ್ದರಿಂದ ಆಧುನಿಕ ಭಾರತದಲ್ಲಿನ ವಿಮರ್ಶೆ ಒಂದು ರೀತಿಯ ಭ್ರಾಮಕ ವಿಮರ್ಶೆಯಾಗಿತ್ತು. ಆಂತರಿಕ ಮೌಲ್ಯವಿಲ್ಲದೆ ಪೊಳ್ಳಾದ ವಿಮರ್ಶೆ ಅದಾಗಿತ್ತು. ಪಾಶ್ಚಿಮಾತ್ಯ ಪರಿಕಲ್ಪನೆಗಳ ಕುರುಡು ಅಂಗೀಕಾರ ಮಾತ್ರವೇ ಭಾರತೀಯ ವಿಮರ್ಶಾ ಲೋಕದ ಗುಣವಾಗಿರಲಿಲ್ಲ. ವಸಾಹತೀಕರಣ ಎರಡು ವಿರುದ್ಧ ಸ್ಥಿತಿಗಳನ್ನು ನಿರ್ಮಿಸುತ್ತದೆ. ಒಂದು : ವಸಾಹತುಕಾರನ ಅನುಕರಣೆ ಮತ್ತು ಇನ್ನೊಂದು, ಗತಭೂತದ ಪುನರುತ್ಥಾನ. ಭಾರತೀಯ ವಿಮರ್ಶೆಯ ಮಟ್ಟಿಗೆ ಪ್ರಾಚೀನ ವಿಮರ್ಶಾ ಸಂಪ್ರದಾಯಗಳನ್ನು ಪುನರುಜ್ಜೀವನಗೊಳಿಸುವ ಪ್ರಯತ್ನಗಳು ಈ ಶತಮಾನದುದ್ದಕ್ಕೂ ನಡೆದೇ ಇವೆ. ಆನಂದಕುಮಾರಸ್ವಾಮಿ, ಎಂ. ಹಿರಿಯಣ್ಣ ಮತ್ತು ಕೃಷ್ಣರಾಯನ್ ರೀತಿಯ ಧೀಮಂತ ವಿಮರ್ಶಕರು ರಸ, ಧ್ವನಿ, ವಕ್ರೋಕ್ತಿ, ಅಲಂಕಾರ ಮುಂತಾದ ಸಂಸ್ಕೃತ ಪರಿಕಲ್ಪನೆಗಳನ್ನು ಪುನಶ್ಚೇತನಗೊಳಿಸಲು ತೀವ್ರವಾಗಿ ಪ್ರಯತ್ನಿಸಿದರು. ಆದರೆ ವಿಮರ್ಶೆಯ ಪಾಶ್ಚಾತ್ಯೀಕರಣ ಮತ್ತು ಪರಂಪರೀಕರಣದ ಪ್ರಯತ್ನಗಳಿಂದಾಗಿ ನಮಗೆ ಸಿಕ್ಕಿರುವುದು ಕೇವಲ ಗತಕಾಲದ ಭ್ರಾಮಕ ಕಲ್ಪನೆ ಮತ್ತು ಭ್ರಾಮಕ ವಿಮರ್ಶೆ. ಈ ವೈಫಲ್ಯದ ಸ್ವರೂಪವನ್ನು ಗ್ರಹಿಸಲು ನಾವು ನಮ್ಮ ಪ್ರಾಚೀನ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಬೇಕು.

ಭಾರತದಲ್ಲಿ ಸೃಜನಶೀಲ ಸಾಹಿತ್ಯದ ಆರಂಭ ಘಟ್ಟದಿಂದ, ರಾಮಾಯಣ, ಮಹಾಭಾರತ ಹಾಗೂ ಶೂದ್ರಕ, ಕಾಳಿದಾಸರ ಕಾಲದಿಂದಲೂ ಸಾಹಿತ್ಯದ ಜೊತೆ ಜೊತೆಗೇ

ಭಾಷಾ ವಿಜ್ಞಾನ ಮತ್ತು ಸಾಹಿತ್ಯಿಕ ಭಾಷಾ ವಿಜ್ಞಾನಗಳು ಬೆಳೆಯುತ್ತಾ ಬಂದವು. ಪಾಣಿನಿ, ಪತಂಜಲಿ, ಭರ್ತೃಹರಿ, ಕಾತ್ಯಾಯನ ಮುಂತಾದ ಭಾಷಾ ವಿಜ್ಞಾನಿಗಳು ಹಾಗೂ ಭರತ, ಭಾಮಹ, ಆನಂದವರ್ಧನ, ಕುಂತಕ ಮುಂತಾದ ಸಾಹಿತ್ಯ ಚಿಂತಕರು ಕಾವ್ಯ ಮತ್ತು ನಾಟಕಕ್ಕೆ ಸಂಬಂಧಿಸಿದ ಪರಿಕಲ್ಪನೆಗಳನ್ನೂ ಬೆಳೆಸಿದ್ದರು. ಭಾಷೆ, ಶೈಲಿ, ಮಹಾಕಾವ್ಯ, ವಾಗರ್ಥಶಾಸ್ತ್ರ, ಶೈಲಿಶಾಸ್ತ್ರ ಇವುಗಳಿಗೆ ಸಂಬಂಧಿಸಿದ ಸಿದ್ಧಾಂತಗಳನ್ನು ಶ್ರದ್ಧೆಯಿಂದ ದಾಖಲಿಸಿ, ರಕ್ಷಿಸಿ ಇವುಗಳನ್ನು ಶಾಲೆಗಳಲ್ಲಿ ಆಸಕ್ತ ವಿದ್ಯಾರ್ಥಿಗಳಿಗೆ ಬೋಧಿಸಲಾಗುತ್ತಿತ್ತು. ಸಿದ್ಧಾಂತಗಳ ತಾತ್ವಿಕ ನೆಲೆಗಟ್ಟು, ಅರ್ಥವ್ಯಾಪ್ತಿ ಇವುಗಳ ಬಗ್ಗೆ ಅರ್ಥಪೂರ್ಣ ಚರ್ಚೆ ನಡೆಯುತ್ತಿತ್ತು. ಈ ಸಿದ್ಧಾಂತಗಳು ಅತಿ ಸೂಕ್ಷ್ಮವಾದ ಪ್ರಬುದ್ಧ ಚಿಂತನೆಗಳಾಗಿದ್ದುವಲ್ಲದೆ, ಅಂದಿನ ತತ್ವಶಾಸ್ತ್ರ ಹಾಗೂ ಭಾಷಾಶಾಸ್ತ್ರದ ಗಟ್ಟಿಯಾದ ತಳಹದಿಯ ಮೇಲೂ ನಿಂತಿದ್ದವು. ಆಧುನಿಕ ಭಾರತ ಆಮದು ಮಾಡಿಕೊಂಡ ವಿಮರ್ಶಾ ವಿಧಾನಗಳ ಹಿನ್ನೆಲೆಯಲ್ಲಿ ನಮ್ಮ ಪ್ರಾಚೀನ ಸಂಸ್ಕೃತ ವಿಮರ್ಶಾ ತತ್ವಗಳು ಆಕರ್ಷಕವಾಗಿ ಕಂಡದ್ದು ಮತ್ತು ಅವುಗಳನ್ನು ಪುನಶ್ಚೇತನಗೊಳಿಸುವ ತವಕ ಹುಟ್ಟಿದ್ದು ಸಹಜವೇ.

ಸಂಸ್ಕೃತ ವಿಮರ್ಶೆಯನ್ನು ಎರಡು ಪ್ರಧಾನ ಘಟ್ಟಗಳಾಗಿ ವಿಂಗಡಿಸಬಹುದು. ಮೊದಲ ಹಂತವು ನಾಲ್ಕನೇ ಅಥವಾ ಐದನೇ ಶತಮಾನದ ಭರ್ತೃಹರಿ ಮತ್ತು ಭರತನಿಂದ ಮೊದಲುಗೊಂಡು ಹತ್ತು-ಹನ್ನೊಂದನೆಯ ಶತಮಾನದ ಅಭಿನವಗುಪ್ತನೊಂದಿಗೆ ಕೊನೆಗೊಳ್ಳುತ್ತದೆ. ಈ ಹಂತದಲ್ಲಿ ಸಾಹಿತ್ಯ ಸೃಷ್ಟಿಯು ಮುಖ್ಯವಾಗಿ ಸಂಸ್ಕೃತದಲ್ಲೇ ನಡೆಯುತ್ತಿದ್ದರೂ ಅಲ್ಲಲ್ಲಿ ಗೌಡಿಯಂತಹ ಭಾಷಾ ಸಾಹಿತ್ಯದ ರಚನೆಯೂ ನಡೆಯುತ್ತಿತ್ತು. ಹನ್ನೊಂದನೆಯ ಶತಮಾನದ ಭೋಜನಿಂದ ಹಿಡಿದು ಹದಿನೇಳನೆ ಶತಮಾನದ ಜಗನ್ನಾಥನವರೆಗಿನ ಕಾಲವನ್ನು ಎರಡನೆಯ ಘಟ್ಟ ಎನ್ನಬಹುದು. ಈ ಕಾಲದಲ್ಲಿ ಸಾಹಿತ್ಯವು ಭಾರತದ ಆಧುನಿಕ ಭಾಷೆಗಳಲ್ಲಿ ಸೃಷ್ಟಿಯಾಗುತ್ತಿದ್ದರೆ ವಿಮರ್ಶೆ ಮಾತ್ರ ಸಂಸ್ಕೃತದಲ್ಲಿತ್ತು. ಅಭಿವ್ಯಕ್ತಿಯ ಭಾಷೆ ಬದಲಾದುದರ ಜೊತೆಗೆ ಕಾಲ, ವ್ಯಕ್ತಿ, ದೇವರು, ಪ್ರಕೃತಿ, ಭೂತಪ್ರಧಾನ ಲೋಕದರ್ಶನಗಳೂ ಸಂಬಂಧಿಸಿದ ಪರಿಕಲ್ಪನೆಗಳಲ್ಲೂ ಬದಲಾವಣೆಗಳು ಕಂಡುಬಂದವು.

ಭಾರತದಲ್ಲಾದ ಈ ವೈಚಾರಿಕ ಕ್ರಾಂತಿಯ ಪೂರ್ಣ ಪ್ರತಿಫಲನ ಭಕ್ತಿಮಾರ್ಗದ ತತ್ವದರ್ಶನದಲ್ಲಿದೆ. ಜನರ ಆಡುಭಾಷೆಯಲ್ಲಿ ಬರೆಯಲಾದ ಭಕ್ತಿಪಂಥದ ಸಾಹಿತ್ಯ, ದೇವರನ್ನು ಮಾನವೀಕರಿಸಿ ಧರ್ಮವನ್ನು ಖಾಸಗಿಯನ್ನಾಗಿಸಿತು. ಜಾತಿಯ ಕಟ್ಟುಗಳನ್ನು ಸಡಿಲಗೊಳಿಸಿತು. ಸಾಂಸ್ಥಿಕ ಧರ್ಮಕ್ಕೆ ಮತ್ತು ಧಾರ್ಮಿಕತೆಗೆ ಬಹುಮುಖೀ ಗುಣವನ್ನು ತಂದುಕೊಟ್ಟಿತು. ಭಕ್ತಿ ಕವಿಗಳಿಗೆ ಸಾಹಿತ್ಯಿಕ ಪ್ರತಿಭೆಯೂ ಇತ್ತು. ತುಕಾರಾಂ, ಕಬೀರ್, ನಾನಕ್, ಮೀರಾ, ಬಸವ ಹಾಗೂ ಚೈತನ್ಯ ಮುಂತಾದವರ ಸಾಹಿತ್ಯ ವಿಶ್ವಮಾನ್ಯ

ವಾದಂತಹುದು. ಇವರು ತಮ್ಮದೇ ಆದ ಕಾವ್ಯ ಮೀಮಾಂಸೆ ಮತ್ತು ಸಂವಹನದ ಮಾರ್ಗಗಳನ್ನೂ ಸಾಹಿತ್ಯಿಕ ಮಾನದಂಡಗಳನ್ನೂ ಕಂಡುಕೊಂಡರು. ಆದರೆ ಎಲ್ಲಾ ಭಕ್ತಿ ಕವಿಗಳೂ ವಿಮರ್ಶೆಯನ್ನು ಒಂದು ಸಾಹಿತ್ಯಿಕ ಕ್ರಿಯೆಯಾಗಿ ನಿರಾಕರಿಸಿದರು. ಭಕ್ತಿಪಂಥದ ಒಂದು ಸಣ್ಣ ಉಪಧಾರೆಯಾಗಿ ವಿಮರ್ಶೆ, ಸಿದ್ಧಾಂತ ಮತ್ತು ಸಾಹಿತ್ಯ ತರ್ಕಗಳ ವಿರುದ್ಧ ಬಂಡಾಯ ರೂಪುಗೊಂಡಿತು. ಎಂಟನೇ ಶತಮಾನದಿಂದೀಚೆಗಷ್ಟೆ ಅತಿಮುಖ್ಯ ಹಾಗೂ ಶಕ್ತವಾದ ಭಾರತೀಯ ಸಾಹಿತ್ಯದ ಸೃಷ್ಟಿಯಾಯಿತು. ಇದಕ್ಕೆ ಕಾರಣವಾದ ನೂರಾರು ಸಾಹಿತಿಗಳು (ಇವರಲ್ಲಿ ಸಂಸ್ಕೃತವನ್ನು ಬಲ್ಲವರೂ ಇದ್ದರು) ಒಟ್ಟಾರೆಯಾಗಿ ಸಾಹಿತ್ಯವನ್ನು ಟೀಕಾಕಾರನ ವಿಮರ್ಶೆಯಿಂದ ಮುಕ್ತಗೊಳಿಸಿದರು. ಈ ಶತಮಾನದ ಪುನರುತ್ಥಾನವಾದೀ ಚಿಂತನೆ ಈ ಮಧ್ಯಕಾಲೀನ ಚಾರಿತ್ರಿಕ ಸತ್ಯವನ್ನು ಮರೆತು ಈಚಿನ ಐದಾರು ಶತಮಾನಗಳ ಕವಿಗಳನ್ನಷ್ಟೆ ಕೇಂದ್ರವಾಗಿಟ್ಟುಕೊಂಡು ಗಣನೆಗೆ ತೆಗೆದುಕೊಂಡ ಪರಂಪರೆಯನ್ನು ಪುನಶ್ಚೇತನಗೊಳಿಸಲೆತ್ನಿಸುತ್ತದೆ. ಮಧ್ಯಕಾಲೀನ ಭಾರತವು ಸಾಹಿತ್ಯದ ದೃಷ್ಟಿಯಿಂದ ಅವನತಿಯ ಕಾಲವೆಂಬ ಗ್ರಹಿಕೆ ತಪ್ಪು. ಭಾರತದ ಚರಿತ್ರೆಯಲ್ಲಿ ಸಾಹಿತ್ಯದ ಪರಮೋಚ್ಚ ಕಾಲ ಅದು. ಪುನರುತ್ಥಾನವಾದವು ಯುರೋಪಿಯನ್ ವಿದ್ವಾಂಸರು ಹುಟ್ಟುಹಾಕಿದ ಇಂಡಾಲಜಿಯಿಂದ ಪ್ರೇರಿತವಾಗಿದ್ದು. ಯುರೋಪಿಯನ್ ಇಂಡಾಲಜಿಯ ದೃಷ್ಟಿಕೋನ ಭಾರತದ ಚರಿತ್ರೆಯನ್ನು ಛಿದ್ರಗೊಳಿಸಿ ಅತಿ ಪ್ರಾಚೀನವಾದದ್ದನ್ನು ಹೊಗಳುತ್ತಲೇ ಈಚಿನ ಭೂತಕಾಲವನ್ನು ತೆಗಳುತ್ತಿರುತ್ತದೆ. ಆದ್ದರಿಂದ, ಆಂತರಿಕವಾಗಿ ಭಾರತೀಯ ವಿಮರ್ಶೆಯನ್ನು ಪಾಶ್ಚಾತ್ಯೀಕರಣಗೊಳಿಸುವ ಮನೋಸ್ಥಿತಿ ಹಾಗೂ ಪುನರುತ್ಥಾನವಾದೀ ಮನೋಸ್ಥಿತಿಗೆ ಹೆಚ್ಚೇನೂ ವ್ಯತ್ಯಾಸವಿಲ್ಲ.

ಮೇಲಿನ ಈ ಎರಡು ಮನೋಸ್ಥಿತಿಗಳೂ ವಿದ್ಯಾವಂತ ಭಾರತೀಯರಲ್ಲಿ, ಅದರಲ್ಲೂ ಪಾಶ್ಚಾತ್ಯೀಕರಣದಿಂದ ಸಾಂಸ್ಕೃತಿಕವಾಗಿ ಅಧೀರರಾದ ವಿದ್ಯಾವಂತ ಭಾರತೀಯರಲ್ಲಿ ಕಾಣುತ್ತದೆ ಎಂಬುದನ್ನು ಗಮನಿಸಬೇಕು. ಆದರೆ ಗ್ರಾಮೀಣ ಭಾರತದ ಹಾಗೂ [illegible] ಕೆಳವರ್ಗದ ಅಸಂಖ್ಯಾತ ಜನರಿಗೆ ಸಾಹಿತ್ಯಾಭಿರುಚಿಯ ಪಾಶ್ಚಾತ್ಯೀಕರಣ ಅ[illegible]ಷ್ಟು ಅನುಭವವೇನಲ್ಲ. ಗ್ರಾಮೀಣ, ದಲಿತ ಬರಹಗಾರರನ್ನು ಪಶ್ಚಿಮದ ಪ್ರಭಾವದ ಭಯ ಕಾಡಿಲ್ಲ. ಯಾವುದೇ ಮರಾಠೀ ಪ್ರೊಫೆಸರನಿಗೂ ನಿಲುಕದ ಮಟ್ಟಿಗೆ ಸಂತಜ್ಞಾನೇಶ್ವರನ ಕಾವ್ಯವನ್ನು ಅಂತರ್ಗತವಾಗಿಸಿಕೊಂಡಿರುವ ಸಹಸ್ರ ಸಹಸ್ರ ವರ್ಕಾರಿಗಳಿಗೆ (ವರ್ಕಾರಿಗಳು ಮಹಾರಾಷ್ಟ್ರದ ದಲಿತ, ಆದಿವಾಸಿ ಜನಾಂಗಕ್ಕೆ ಸೇರಿದವರು) ಎಂದೂ ಭವಿಷ್ಯಕಾರನ ವಿಮರ್ಶೆ ಬೇಕೆನ್ನಿಸಿಲ್ಲ. ಅವರಲ್ಲಿ ಸಾಹಿತ್ಯ ಮತ್ತು ವ್ಯಕ್ತಿಗತ ಜೀವನದ ನಡುವೆ ವಿಮರ್ಶಾ ಸಂಬಂಧವೇರ್ಪಟ್ಟಿರುತ್ತದೆ. ಸೂಕ್ತ ವಿಮರ್ಶಾ ಚಿಂತನ ಕ್ರಮವೊಂದರ ಗೈರುಹಾಜರಿ ಮತ್ತು ಅದರಿಂದುಂಟಾಗುವ ಗೊಂದಲ ಮತ್ತು ಕೀಳರಿಮೆ ಮುಂತಾದವುಗಳು ಭಾಗಶಃ ಪಾಶ್ಚಾತ್ಯೀಕರಣಗೊಂಡಿರುವ ನಗರವಾಸೀ ಮಧ್ಯಮವರ್ಗಕ್ಕೆ ಸೀಮಿತವಾದ

ಸಮಸ್ಯೆಗಳಷ್ಟೆ. ಇಂಥವರಿಗೆ ಪಾಶ್ಚಾತ್ಯ ಮತ್ತು ಸಂಸ್ಕೃತ ವಿಮರ್ಶೆ ಎರಡನ್ನೂ ದಕ್ಕಿಸಿಕೊಳ್ಳುವ ಭ್ರಮೆ ಇರುತ್ತದೆ. ಇಂತಹ ಗ್ರಹಿಕೆ ಮತ್ತು ಇಂದಿನ ಭಾರತದ ಸಾಂಸ್ಕೃತಿಕ ವಾಸ್ತವಗಳ ನಡುವೆ ದೊಡ್ಡ ಕಂದರವೇ ಇದೆ. ಇದಕ್ಕೆ ಕಾರಣ ವಸಾಹತುಶಾಹೀ ಅನುಭವದಿಂದ ಉಂಟಾಗಿರುವ ಸಾಂಸ್ಕೃತಿಕ ವಿಸ್ಮೃತಿ.

ಮೇಲಿನ ವಾದದ ಬೆಳಕಿನಲ್ಲಿ ಸ್ಪಷ್ಟವಾಗುವ ಅಂಶವೊಂದಿದೆ. ಚಿಂತನೆಗಳು ತಾತ್ವಿಕವಾಗಿ ಎಷ್ಟೇ ಆಕರ್ಷಕವಾಗಿದ್ದರೂ ಅವು ಭಿನ್ನ ಸಾಂಸ್ಕೃತಿಕ ಸಂದರ್ಭವೊಂದರಲ್ಲಿ ಅಪ್ರಸ್ತುತವೂ. ನಿಷ್ಪ್ರಯೋಜಕವೂ ಆಗುತ್ತವೆ. ಆದ್ದರಿಂದ ಸಂಸ್ಕೃತ ಕಾವ್ಯಮೀಮಾಂಸೆಯ ಪುನಶ್ಚೇತನವಾಗಲೀ, ಪಾಶ್ಚಾತ್ಯ ಸೌಂದರ್ಯಮೀಮಾಂಸೆಯ ಸ್ವೀಕಾರವಾಗಲೀ ನಮ್ಮ ಸಮಸ್ಯೆಗಳಿಗೆ ಉತ್ತರವಲ್ಲ. ಭಾರತದ ಸಾಂಸ್ಕೃತಿಕ ಜೀವನದ ಈಗಿನ ಸಾಮಾನ್ಯ ಗ್ರಹಿಕೆಯೆಂದರೆ ನಮ್ಮ ಸಂಸ್ಕೃತಿ ಈಗ ಕವಲು ದಾರಿಯಲ್ಲಿದೆ ಎಂಬುದು. ಈ ಘಟ್ಟದಲ್ಲಿ ಆಧುನಿಕತೆ ಮತ್ತು ಪರಂಪರೆಯ ನಡುವಿನ ಆಯ್ಕೆಯ ಸಂದರ್ಭದಲ್ಲಿ ಕಟ್ಟೆಚ್ಚರ ದಿಂದಿರಬೇಕಾದ ಅಗತ್ಯವಿದೆ. ವಸಾಹತೀಕರಣದ ಮೂಲಕ ಬಂದ ಆಧುನಿಕತೆಯನ್ನು ಸ್ವೀಕರಿಸುವುದನ್ನು ಕುರಿತಂತೆ, ಎಂಭತ್ತು ವರ್ಷಗಳ ಹಿಂದೆ ಗಾಂಧೀಜಿಯ 'ಹಿಂದ್ ಸ್ವರಾಜ್' ಇದನ್ನೇ ಸೂಚಿಸಿತ್ತು. ಪರಂಪರೆಯ ರಕ್ಷಣೆ ಎಂದರೆ 'ಭೂತ'ದ ಹೆಣಭಾರ ಹೊರುವ ಪುನರುತ್ಥಾನವಾದೀ ಉತ್ಸಾಹದ ಮಾರ್ಗವೊಂದೇ ಅಲ್ಲ. ಈ ತಪ್ಪು ಗ್ರಹಿಕೆಗಳೇ ಹತ್ತೊಂಭತ್ತನೇ ಶತಮಾನದ ಓರಿಯಂಟಲಿಸ್ಟರು ಮತ್ತು ಆಂಗ್ಲಿಸಿಸ್ಟರ ನಡುವೆ ನಡೆಯುತ್ತಿದ್ದ ಚರ್ಚೆಯ ಕೇಂದ್ರವಾಗಿದ್ದವು. ಅದು ಪ್ರಾಚೀನ-ನವೀನಗಳ ನಡುವಣ ಚರ್ಚೆಯೂ ಆಗಿತ್ತು. ಆಗಿನ ಚರ್ಚೆಯಲ್ಲಿ ಸಣ್ಣ ದನಿಯಾಗಿ ಮಾತ್ರ ಇದ್ದ ಇನ್ನೊಂದು ನೆಲೆ ಸಮಕಾಲೀನ ಸಮಾಜದ್ದಾಗಿತ್ತು. ಆ ಸಮಾಜದ ಜೀವದ್ರವ್ಯ ಅರೇಬಿಕ್, ಸಂಸ್ಕೃತ ಅಥವಾ ಇಂಗ್ಲಿಷ್ ಆಗಿರದೆ ಆಧುನಿಕ ಭಾರತದ ಪ್ರಾಂತೀಯ ಭಾಷೆಯಾಗಿತ್ತು. ಹಿಂದಿನ ತಪ್ಪುಗಳನ್ನೇ ನಾವು ಮತ್ತೆ ಮಾಡಬಾರದು. ಈಗಿನ ನಮ್ಮ ವಿಮರ್ಶೆ ತನ್ನ ವೈಚಾರಿಕತೆ ಮತ್ತು ನುಡಿಗಟ್ಟುಗಳನ್ನು ಸಮೃದ್ಧವಾದ ಭಾರತದ ಆಧುನಿಕ ಭಾಷೆಗಳ ಅಂದರೆ ಹತ್ತನೆಯ ಶತಮಾನದಿಂದೀಚೆಗೆ ಬೆಳವಣಿಗೆ ಹೊಂದಿದ ಪ್ರಾಂತೀಯ ಭಾಷೆಗಳ ಸಾಹಿತ್ಯದಲ್ಲಿ ಕಂಡುಕೊಳ್ಳಬೇಕು.

ಜೊತೆಗೆ ಮಧ್ಯಕಾಲೀನ ಭಕ್ತಿಸಾಹಿತ್ಯವನ್ನು ಬೌದ್ಧಿಕ ಕ್ಲೀಶೆಯನ್ನಾಗಿಸಬಾರದು. ಅಲ್ಲದೆ, ಮಧ್ಯಕಾಲೀನ ಭಕ್ತಿ ಕವಿಗಳು ಸಂಸ್ಕೃತ ವಿಮರ್ಶೆಯ ಸಿದ್ಧಾಂತಗಳನ್ನು ಧಿಕ್ಕರಿಸಿದ್ದು ತಮ್ಮ ಮನೋಲೋಕದ ಮೇಲಿನ ಸಂಸ್ಕೃತದ ಹಿಡಿತವನ್ನು ತೊಡೆಯುವುದಕ್ಕಾ[illegible]ಂದ ಮಾತ್ರಕ್ಕೆ ನಾವು ಈಗಲೂ ಅದೇ ಬಗೆಯ ವಿರೋಧೀ ನಿಲುವನ್ನು ತಳೆಯಬೇಕೆಂಬೇನೂ ಇಲ್ಲ. ಹಾಗೆ ತಳೆದ ನಿಲುವು ಕೂಡ ಒಂದು ರೀತಿಯ ಹಿಂದಿನವರ ಅಂಧಾನುಕರಣೆಯೇ ಆಗಿಬಿಡುತ್ತದೆ. ವಿಮರ್ಶೆಯ ಗೈರುಹಾಜರಿಯಲ್ಲೂ ಸಮುದಾಯಗಳ ಸಾಂಸ್ಕೃತಿಕ ಬದುಕು

ತೀವ್ರವಾಗಿರುವುದು ಸಾಧ್ಯವಿದ್ದರೂ ಅಂತಹ ಸ್ಥಿತಿಯನ್ನೇ ಆರು ಶತಮಾನಗಳ ನಂತರ ಪುನರ್ ನಿರ್ಮಿಸುವ ಅಪೇಕ್ಷೆಯೇನೂ ಇರಬೇಕಿಲ್ಲ.

ಈ ಶತಮಾನದಲ್ಲಿ ಭಾರತೀಯ ಭಾಷೆಗಳಲ್ಲಿನ ಸೃಜನಶೀಲ ಸಾಹಿತ್ಯ ಎಲ್ಲಾ ಪ್ರಾಕಾರಗಳಲ್ಲೂ ಅಗಾಧವಾಗಿ ಬೆಳೆದಿದೆ. ಹೊಸ ಅಭಿವ್ಯಕ್ತಿ ಮಾಧ್ಯಮಗಳಾದ ಟೆಲಿವಿಷನ್ ಮತ್ತು ಸಿನೆಮಾ ಭಾರತೀಯ ಸಾಂಸ್ಕೃತಿಕ ಜೀವನದ ಕೇಂದ್ರ ರಂಗಕ್ಕೆ ಬಂದಿವೆ. ಅಕ್ಷರಸ್ಥ ಜನಸಮುದಾಯ ಬೆಳೆದಂತೆಲ್ಲ ಸಾಹಿತ್ಯದ ಉಪಪ್ರಕಾರಗಳಾದ ವರದಿ. ಸಾಹಿತ್ಯ, ಜನಪ್ರಿಯ ಸಾಹಿತ್ಯ, ಸಮೂಹ ಸಾಹಿತ್ಯ, ಮತ್ತು ವಿಶೇಷೀಕೃತ ಸಾಹಿತ್ಯಗಳು ಹುಲುಸಾಗಿ ಬೆಳೆದಿವೆ. ಭಾರತೀಯ ಭಾಷೆಗಳು ಮತ್ತು ಸಾಹಿತ್ಯಗಳ ಬಗ್ಗೆ ಸಂಶೋಧನಾ ಸಾಮಗ್ರಿ ವಿಪುಲವಾಗಿ ದೊರೆಯುವಂತಾಗಿದೆ. ಇಂಥ ಸಂದರ್ಭದಲ್ಲಿ ಭಾರತೀಯ ಸಾಹಿತ್ಯದ ಎದುರು ಮುಖ್ಯ ಜವಾಬ್ದಾರಿಯೊಂದಿದೆ. ಪ್ರಸ್ತುತ ಭಾರತೀಯ ವಿಮರ್ಶೆ ತನ್ನನ್ನಾವರಿಸಿರುವ ಸಾಂಸ್ಕೃತಿಕ ವಿಸ್ಮೃತಿಯ ಮಬ್ಬಿನಿಂದ ಹೊರ ಬಂದು ತನ್ನ ದೇಸೀ ಪರಂಪರೆಗಳ ಬಗ್ಗೆ ಹೆಚ್ಚಿನ ಆತ್ಮಗೌರವ ಮತ್ತು ವಿಶ್ವಾಸದಿಂದ ಮಾತನಾಡಬೇಕಾಗಿದೆ. ಕಳೆದ ಒಂದೂವರೆ ಶತಮಾನದಿಂದ ಭಾರತೀಯ ಸಾಹಿತ್ಯಕ್ಕೂ ಮತ್ತು ವಿಮರ್ಶೆಗೂ ಸಾವಯುವ ಸಂಬಂಧ ಇಲ್ಲವಾಗಿದೆ. ಭಾರತೀಯ ವಿಮರ್ಶೆಯ ಎದುರಿಗಿರುವ ಸವಾಲೆಂದರೆ ಈ ಮುಂದಿನ ಕೊಂಡಿಯನ್ನು ಪುನರ್ ಸ್ಥಾಪಿಸುವುದೇ ಆಗಿದೆ. ಈ ದಿಸೆಯಲ್ಲಿ ವಿಮರ್ಶೆ ಕುರಿತ ನಮ್ಮ ಹಾಲೀ ಕಲ್ಪನೆಗಳ ಸಂಪೂರ್ಣ ಪುನರ್ ಪರಿಶೀಲನೆ ಅತ್ಯಗತ್ಯ.

●

# ಭಾಷೆ : ಶಕ್ತಿ : ಪ್ರಭುತ್ವ

*ಹಿಂದಿ ಮೂಲ :* ಅಶೋಕ ರಾ. ಕೇಳಕರ್
*ಅನು :* ಡಾ. ಟಿ. ಜಿ. ಪ್ರಭಾಶಂಕರ 'ಪ್ರೇಮಿ'

ನಿಮ್ಮ ಅನುಮತಿ ಪಡೆದು ನಾನು ಕೆಲವು ಪ್ರಶ್ನೆಗಳನ್ನು ಹಾಕಿಕೊಂಡು, ಪ್ರತಿ ಪ್ರಶ್ನೆಗಳಿಗೂ ಉತ್ತರ ಹುಡುಕುವ ಪ್ರಯತ್ನವನ್ನೂ ಮಾಡುತ್ತೇನೆ. ಈ ಮೂರೂ ಪ್ರಶ್ನೆಗಳು ಪರಸ್ಪರ ಸಂಬಂಧಿಸಿದವು ಎಂಬುದನ್ನು ಮತ್ತೆ ಹೇಳಬೇಕಿಲ್ಲ. ಇವು ವೃತ್ತದ ಕೊಂಡಿಗಳು. ನನ್ನ ಪ್ರಶ್ನೆಗಳು ತಮಗೆ ಎಷ್ಟು ಸಮಂಜಸವಾಗಿ ತೋರುತ್ತವೋ ನೋಡೋಣ.

ಮೊದಲ ಪ್ರಶ್ನೆ : ಭಾಷೆಯಲ್ಲಿ ಯಾವುದಾದರೊಂದು ಶಕ್ತಿ ಇದೆಯೇ? ಅಂದರೆ, ಭಾಷೆ ಯಾವುದಾದರೂ ಶಕ್ತಿಯಿಂದ ಆವಿಷ್ಕಾರಗೊಂಡುದೇ?

ಇದಕ್ಕೆ ಸಾಕ್ಷಿಯಾಗಿ ನಾನು ಮೊದಲು ಡೆಸ್ಡಿಮೋನಾಳನ್ನು ತರುವೆ. ಒಥೆಲೊ ಯಾವುದೋ ಶಕ್ತಿಯನ್ನು ಪ್ರಯೋಗಿಸಿ ಡೆಸ್ಡಿಮೋನಾಳನ್ನು ತನ್ನ ವಶದಲ್ಲಿಟ್ಟುಕೊಂಡಿದ್ದಾನೆ ಎಂಬ ಆರೋಪ ಅವನ ಮೇಲಿದೆ ಎಂಬುದು ನೆನಪಿರಲಿ. ಡೆನ್ಮಿಸಿನ ರಾಜನ ಮುಂದೆ ಆಕ್ಷೇಪಣೆಗೆ ಉತ್ತರಿಸುತ್ತಿದ್ದಾನೆ. (ಒಥೆಲೊ - ಅಂಕ1, ಪ್ರವೇಶ 3)

> Her father lov'd me, off invited me;
> still question'd me the story of my life
> From year to year...
> I ran it through....
> Wherein I spell of most disastrous chances,
> of moving-accidents by flood and field;
> of hair breadth' scapes.....
> This to hear
> would Desdemona seriously incline....
> She'd come again, and with a greedy car
> Devour up my discourse
> .... often did (I) beguile her of her tears

· She gave me for my pains a world of sighs
that haven had made her... she wished such a man, she thanked me;
and bade me, :f I had a friend that loved her
I should but teach him how to tell my story
And that would woo her. upon this hint I spake
She lov`d me for the dangers I had pass'd
And I lov`d her that she did pity them
This only is the witchcraft I have us`d
Here comes the lady; let her witness it.

ಡೆಸ್ಡಿಮೋನಾಳನ್ನು ಕೇಳಿದಾಗ ಒಥೆಲೋ ಅವಳನ್ನು ಶಬ್ದಗಳ ಶಕ್ತಿಯಿಂದಲೇ ಗೆದ್ದ ಎಂಬ ಮಾತಿಗೆ ಪುಷ್ಟಿಗೆ ಸಿಗುತ್ತದೆ.

ನಮ್ಮ ಭಾರತೀಯ ನಾಗರೀಕತೆಯಲ್ಲಿ ನಾವು ಭಾಷಾ ಕೌಶಲ್ಯವನ್ನು ಹೆಚ್ಚು ಇಷ್ಟಪಡುತ್ತೇವೆ. ಸಂಸ್ಕೃತದಲ್ಲಿ ಬಾಣ-ರೂಪಕಗಳಲ್ಲಿ ಬರುವ ವಿಟನ ಪಾತ್ರ ತನ್ನ ಭಾಷಾ ಕೌಶಲ್ಯದ ಮೂಲಕ ಸಂವಿಧಾನಕವನ್ನು ಮುಂದುವರಿಸುತ್ತಾನೆ. ಮರಾಠಿಯ ತಮಾಷಾ ನಾಟ್ಯದ ಸೋಂಗಾಡಯನ ಪಾತ್ರ ಅದೇ ಪಾತ್ರದ ನಂತರದ ಅವತಾರ ಎನ್ನಲಾಗಿದೆ. ಹಾಗೆಯೇ ಭೋಜಪುರಿಯ ಕಕ್ಕಾಜಿ ಪಾತ್ರ ಇತ್ತೀಚಿನ ಅವತಾರ.

ಭಾಷಾ ಕೌಶಲ್ಯ ಕೇವಲ ಭಾಷಣಕಾರ ಅಥವಾ ಲೇಖಕನಲ್ಲಿ ಮಾತ್ರವಲ್ಲ, ಶ್ರೋತೃ ಅಥವಾ ಓದುಗನಲ್ಲೂ ಇರುತ್ತದೆ. ಭಾಷಣಕಾರನಾಗಲೀ, ಶ್ರೋತೃವಾಗಲೀ, ಲೇಖಕ ಅಥವಾ ಓದುಗನಾಗಲೀ ಶಬ್ದ ಮತ್ತು ಅರ್ಥಗಳ ಪರಸ್ಪರ ಸಂಬಂಧವನ್ನು ಸರಿಯಾದ ರೀತಿಯಲ್ಲಿ ಸಕ್ರಿಯಗೊಳಿಸುವ ಕೆಲಸ ಸಂಜ್ಞಾಪಕ ಮತ್ತು ಸಂಬೋಧಿತ ಇಬ್ಬರಿಗೂ ಸೇರಿದ್ದು. ಈ ಶಬ್ದಾರ್ಥ ಸಂಬಂಧ ಶಬ್ದ ಶಕ್ತಿಯ ಮೂಲಕ ಕ್ರಿಯಾಶೀಲವಾಗುತ್ತದೆ. ಶ್ರೋತೃ ಕೇಳುತ್ತಿದ್ದಂತೆಯೆ ಒಂದು ಕಡೆ ಶಬ್ದ, ಮತ್ತೊಂದು ಕಡೆ ಶಬ್ದವನ್ನು ಸಚೇತನಗೊಳಿಸುವ ಶಬ್ದಶಕ್ತಿಯ ಸಂಯೋಗವಾಗುತ್ತದೆ. ಅಂದರೆ, ಶಬ್ದ ಪ್ರಯೋಗವಾಗುತ್ತದೆ. ಈ ಶಬ್ದ ಪ್ರಯೋಗದಿಂದ ಅರ್ಥ ನಿಷ್ಪನ್ನವಾಗುತ್ತದೆ.



ಶಬ್ದ ಶಕ್ತಿ ಅಭಿಧಾಶಕ್ತಿಯ ರೂಪ ಪಡೆಯಲಿ, ಅಥವಾ ವ್ಯಂಜನಾಶಕ್ತಿಯ ರೂಪ ಪಡೆಯಲಿ, ವಾಚ್ಯಾರ್ಥ ಶಕ್ತಿ ಅಥವಾ ಲಕ್ಷ್ಯಾರ್ಥ ಶಕ್ತಿಯ ರೂಪ ಪಡೆಯಲಿ - ಅದರ ಕಾರ್ಯ ಸಂಬೋಧಿತನನ್ನು ಶಬ್ದದಿಂದ ಅರ್ಥದ ಕಡೆಗೆ ತೆಗೆದುಕೊಂಡು ಹೋಗುವುದು. ಆದರೆ ಭಾಷಣಕಾರ ಮಾತನಾಡಿದಾಗ ಇವಕ್ಕೆ ತದ್ವಿರುದ್ಧ ಕ್ರಿಯೆಯಾಗುತ್ತದೆ. ಅಂದರೆ ಒಂದು ಕಡೆ ಅರ್ಥ ಮತ್ತೊಂದು ಕಡೆ ಅರ್ಥವನ್ನು ರೂಪಿಸುವ ಶಬ್ದ ಶಕ್ತಿಗಳ ಸಂಯೋಗವಾಗುತ್ತದೆ. ಅಂದರೆ, ಶಬ್ದ ಪ್ರಯೋಗವಾಗುತ್ತದೆ. ಈ ಶಬ್ದ ಪ್ರಯೋಗದಿಂದ ಶಬ್ದ ನಿಷ್ಪನ್ನವಾಗುತ್ತದೆ. ಈ ಶಬ್ದ ಶಕ್ತಿಯನ್ನು ನಮ್ಮ ಪೂರ್ವಜರು 'ಉಕ್ತಿ' ಎಂದಿದ್ದಾರೆ. ಉಕ್ತಿ ಅರ್ಥವನ್ನು ಶಬ್ದದ ಸಹಾಯದಿಂದ ಪರ ಸಂವೇದ್ಯವನ್ನಾಗಿ ಮಾಡುತ್ತದೆ.




ಉಕ್ತಿಯ ಶಕ್ತಿ ಸ್ವಾಭಾವಿಕವಾಗಿರಲಿ, ಇಲ್ಲ ಅತಿಶಯೋಕ್ತಿಯ ರೂಪದಲ್ಲಿರಲಿ, ಸರಳೋಕ್ತಿಯಾಗಿರಲಿ, ವಕ್ರೋಕ್ತಿಯ ರೂಪದಲ್ಲಿರಲಿ, ಅದರ ಕಾರ್ಯ ಸಂಜ್ಞಾಪಕನನ್ನು ಅರ್ಥದಿಂದ ಶಬ್ದದ ಕಡೆಗೆ ಒಯ್ಯುವುದು. ಶಬ್ದ ಪ್ರಯೋಗದಿಂದಾಗುವ ನಿಷ್ಪತ್ತಿ ಅರ್ಥದ್ದಾಗಿರಲಿ, ಶಬ್ದದ್ದಾಗಿರಲಿ ಅದು ಭಾಷೆಯಲ್ಲಿ ಯಾವುದೋ ಶಕ್ತಿ ಇದೆ ಎಂಬುದನ್ನು ಗುರುತಿಸುತ್ತದೆ. ಭಾಷಾ ಪ್ರಯೋಗ ಈ ಶಬ್ದ ಶಕ್ತಿಯದ್ದೆ ಆವಿಷ್ಕಾರ. ಅದು ಶಬ್ದ ಮತ್ತು ಅರ್ಥದ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ.

ಈ ಶಬ್ದಾರ್ಥ ಸಂಬಂಧ ಮತ್ತು ಶಬ್ದ ಶಕ್ತಿ ಭಾಷಾ ವ್ಯವಸ್ಥೆಯಲ್ಲಿ ಅಡಗಿರುತ್ತದೆ. ಭಾಷಾ ವ್ಯವಸ್ಥೆಯನ್ನು ತನ್ನದು ಮಾಡಿಕೊಳ್ಳುವುದರಿಂದ ಯಾರು ಬೇಕಾದರೂ ಯಾವ ಭಾಷಾ ಸಮಾಜದ ಸದಸ್ಯರಾದರೂ ಆಗಬಹುದು. ಭಾಷಾ ಸಮಾಜದ ಸದಸ್ಯ ಭಾಷಾ ವ್ಯವಸ್ಥೆಯ ಮೂಲಕ 'ಸುಖೇನ' ಶಬ್ದದಿಂದ ಅರ್ಥದವರೆಗೆ ತಲುಪುತ್ತಾನೆ ಅಥವಾ ಅರ್ಥದಿಂದ ಶಬ್ದದವರೆಗೆ ತಲುಪುತ್ತಾನೆ. ಈಗ ಪ್ರಶ್ನೆಯೆಂದರೆ ವ್ಯಕ್ತಿಯೊಬ್ಬ ಹೇಗೆ ಯಾವುದೇ ಭಾಷಾಸಮಾಜದ ಸದಸ್ಯನಾಗುತ್ತಾನೆ ಮತ್ತು ಹೇಗೆ ಸದಸ್ಯನಾಗಿ ಮುಂದುವರೆಯುತ್ತಾನೆ? ಸದಸ್ಯನಾಗುವ ಪ್ರಶ್ನೆ ವಿಶೇಷವಾಗಿ ಮಕ್ಕಳ ಸಂದರ್ಭದಲ್ಲಿ ಉದ್ಭವಿಸುತ್ತದೆ. (ನಮ್ಮ ಪೂರ್ವಜರ ಮಾತಿನಲ್ಲಿ ಹೇಳುವುದಾದರೆ, ಮಗು ಹೇಗೆ 'ಶಬ್ದ ಶಕ್ತಿ ಗ್ರಾಹ' ಮಾಡಿಕೊಳ್ಳುತ್ತದೆ?) ಸದಸ್ಯನಾಗಿ ಮುಂದುವರೆಯುವ ಪ್ರಶ್ನೆ ವಿಶೇಷವಾಗಿ ಪ್ರೌಢ ವಯಸ್ಕರಲ್ಲಿ ಇದ್ದೇ ಇರುತ್ತದೆ. ಅದು ಪ್ರಕೃತಿಯ ವರದಾನ.

(ಮಾತುಗಳನ್ನು ಕೇಳುತ್ತಾ ಕೇಳುತ್ತಾ ಗಿಳಿ ಅಥವಾ ಮಗು ಪುನರುಚ್ಚರಿಸುತ್ತದೆ. ಆದರೆ ಗಿಳಿ ಗಿಳಿಯೇ ಆಗಿ ಉಳಿಯುತ್ತದೆ. ಆದರೆ ಭಾಷಾ ಸಮಾಜದ ಸದಸ್ಯತ್ವ ಪಡೆಯುತ್ತದೆ.) ಭಾಷಾ ಸಮಾಜದ ಸದಸ್ಯನಾಗಿ ಮನುಷ್ಯ ಭಾಷಾಶಕ್ತಿಯ ಸಹಾಯ ಪಡೆದು ತನ್ನ ಇಚ್ಛಾನುಸಾರ ಭಾಷಾ ಪ್ರಯೋಗ ಮಾಡುತ್ತಾನೆ. ಈ ಪೂರ್ಣ ಕ್ರಿಯೆಯ ನಡುವೆಯೆ ಭಾಷಾ ವ್ಯವಸ್ಥೆಯ ನಿರ್ಮಾಣವಾಗುತ್ತದೆ ಅಥವಾ ಹೆಚ್ಚು ಕಡಿಮೆ ಪುನರ್ನಿರ್ಮಾಣವೇ ಆಗುತ್ತದೆ.




ಭಾಷಾ ವ್ಯವಸ್ಥೆ ಮತ್ತು ಭಾಷಾ ಪ್ರಯೋಗಗಳ ಪರಸ್ಪರ ಸಂಬಂಧ ಒಂದು ರೀತಿಯ ದ್ವಂದ್ವಾತ್ಮಕ ಸ್ವಯಂಗತಿಯಿಂದ ಕೂಡಿರುತ್ತದೆ. ಭಾಷಾ ವ್ಯವಸ್ಥೆಯಿಂದ ಭಾಷಾ ಪ್ರಯೋಗ ನಿಯಮಬದ್ಧವಾಗುತ್ತದೆ. ಹಾಗೆ ನಿಯಮಬದ್ಧವಾಗದಿದ್ದರೆ ಮನುಷ್ಯ ಸ್ವಸಂವಾದದಿಂದಲೇ ತೃಪ್ತನಾಗಬೇಕಾಗುತ್ತಿತ್ತು. ಅವನು ಅನ್ಯ ಸಂವಾದದ ಕಡೆಗೆ ಮುಂದುವರಿಯಲಾಗುತ್ತಿರಲಿಲ್ಲ. ಭಾಷಾಪ್ರಯೋಗದಿಂದ ಭಾಷಾ ವ್ಯವಸ್ಥೆಯಲ್ಲಿ ನಿತ್ಯನೂತನೀಕರಣವಾಗುತ್ತಿರುತ್ತದೆ. ಹಾಗೆ ನಿತ್ಯನೂತನೀಕರಣ ಆಗದಿದ್ದರೆ ಮನುಷ್ಯ ಅನ್ಯಸಂವಾದದಿಂದಷ್ಟೆ ತೃಪ್ತನಾಗಬೇಕಾಗುತ್ತಿತ್ತು. ಅವನು ಅನ್ಯೋನ್ಯ ಸಂವಾದದ ಕಡೆಗೆ ಮುಂದುವರಿಯುತ್ತಿರಲಿಲ್ಲ. (ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಭಾಷಾ ವ್ಯವಸ್ಥೆ ಮತ್ತು ಭಾಷಾ ಪ್ರಯೋಗಗಳ ಸಂಬಂಧ ಹೆಗೆಲ್‌ನ ಅರ್ಥದಲ್ಲಿ ಡಯಲೆಕ್ಟಿಕಲ್ ಆದದ್ದು. ಅದನ್ನು ನಾವು ಶ್ರೀ ದಿನಕರ ಕೇಶವ ಬೆಡೇಕರ್‌ರಂತೆ 'ದ್ವಂದ್ವಾತ್ಮಕ ಸ್ವಯಂಗತಿ' ಎಂದಿದ್ದೇವೆ. ನೀವು ಕೂಡ ಇದನ್ನು ಒಪ್ಪುವುದಾದರೆ ನಿಮ್ಮಲ್ಲೂ ಕೂಡ ಭಾಷಾ ವ್ಯವಸ್ಥೆಯಲ್ಲಿ ನೂತನೀಕರಣ ಸ್ವಲ್ಪವಾದರೂ ಆಗಬಹುದು.)

ನಾವು ಈಗ ಹೇಳಿದಂತೆ ಪ್ರಯೋಗ ಮತ್ತು ವ್ಯವಸ್ಥೆಯ ಸಂಬಂಧ ಒಂದೇ ದಿಕ್ಕಿನದಾಗಿರದೆ ಉಭಯ ದಿಕ್ಕಿನದು. ಇದೇ ಮಾತು ಶಬ್ದ ಮತ್ತು ಅರ್ಥಗಳಿಗೂ ಅನ್ವಯಿಸುತ್ತದೆ. ಎರಡರ ಸಂಬಂಧ ಒಂದೇ ದಿಕ್ಕಿನದಾಗಿರದೆ ಉಭಯ ದಿಕ್ಕಿನದು. ಸಾಮಾನ್ಯವಾಗಿ ಜನರು ಅರ್ಥ ನಿರ್ಮಾಣವಾಗಿಯೇ ಇರುತ್ತದೆ ಎಂದು ತಿಳಿಯುತ್ತಾರೆ. ಕೇವಲ ಶಬ್ದದೊಡನೆ ಜೋಡಿಸಿದರೆ ಸಾಕು ಎಂಬುದು ಅವರ ತಿಳಿವಳಿಕೆ. ಆದರೆ ಇದು ಸರಿಯಾದ ನಿಲುವಲ್ಲ. ಒಥೆಲೊನ ಭಾಷಾ ಕೌಶಲ್ಯವನ್ನು ಡೆಸ್ಡಿಮೋನಾ ಅಷ್ಟೇಕೆ

ಪ್ರಶಂಸಿಸಿದಳು? ಶಬ್ದ ನಿಜವಾಗಿ ಅರ್ಥದ ಮಾಧ್ಯಮವಾಗಿರುತ್ತದೆ. ಶಬ್ದ ಕೇವಲ ಅರ್ಥವನ್ನು ಹೊರುವುದಿಲ್ಲ, ಅದು ಅರ್ಥವನ್ನು ರೂಪಿಸುತ್ತದೆ ಅಥವಾ ಎರಕ ಹೊಯ್ದು ನಿರ್ಮಿಸುತ್ತದೆ. ಭಾಷೆ ಅರ್ಥಗಳನ್ನು ಸಂಗ್ರಹಿಸುವ ಮಾಧ್ಯಮ. ಒಥೆಲೊ ಒಬ್ಬ ಕವಿಯಂತೆ ಡೆಸ್ಡಿಮೊನಾಳ ಎದುರು ಒಂದು ಹೊಸ ಸೃಷ್ಟಿಯನ್ನು ಶಬ್ದಗಳ ಮಾಧ್ಯಮದಿಂದ ಮಾಡಿದ್ದ. ಒಥೆಲೊ ಸ್ವಸಂವಾದದಿಂದ ಪ್ರಾರಂಭಿಸಿ ಅನ್ಯ ಸಂವಾದದ ಕಡೆಗೆ ಮುಂದುವರೆಯುತ್ತಾನೆ. ಮತ್ತೆ ಅನ್ಯ ಸಂವಾದದಿಂದ ಅನ್ಯೋನ್ಯ ಸಂವಾದವನ್ನು ಸಾಧಿಸುತ್ತಾನೆ. ಅಂದರೆ ಅರ್ಥ ಆಕಲನರೂಪಿ ಭಾಷಿಕ ಚಲನೆಯಲ್ಲಿ ಸ್ವಗತ-ಸ್ವಸಂವಾದದ ಒಂದು ಕಡೆ soliloquy ಅಥವಾ ಇಂಟೀರಿಯರ್ ಮೋನೋಲಾಗ್) ಮತ್ತೊಂದೆಡೆ ಸಂಭಾಷಣೆ ಅಥವಾ ಅನ್ಯೋನ್ಯ ಸಂವಾದ (ಡಾಯಲಾಗ್ ಅಥವಾ ಕೊಲೊಕಿ). ಇವುಗಳ ಮಧ್ಯದ ಕೊಂಡಿ ಅನ್ಯ ಸಂವಾದ (ಮೊನೋಲಾಗ್)ದ್ದಾಗಿರುತ್ತದೆ.

ಕೆಲವು ವೇಳೆ ಈ ಸಂವಾದ ಕಡಿದು ಹೋಗುತ್ತದೆ. ಒಂದು ಕಾಲಕ್ಕೆ ಸಂಸ್ಕೃತ ಭಾರತದಲ್ಲಿ ದೈನಂದಿನ ಭಾಷೆಯಾಗಿರಲಿಲ್ಲ. ಮಕ್ಕಳಿಗೆ, ಸ್ತ್ರೀ ಶೂದ್ರಾದಿಗಳಿಗೆ ಆ ಭಾಷೆಯ ಸಮಾಜದಲ್ಲಿ ಪ್ರವೇಶವಿರಲಿಲ್ಲ. ಇದರಿಂದಲೆ ಅದು ಹಾಳಾಯಿತು ಎಂದೇನೂ ಅಲ್ಲ. ಯಾವುದಾದರೂ ಭಾಷೆ ಸಾಯುವುದು ಸಹಜವಾಗಿಯೇ ಒಂದು ಐತಿಹಾಸಿಕ ಪ್ರಕ್ರಿಯೆಯಾಗಿದೆ. ಆದಾಗ್ಯೂ ಸಂಸ್ಕೃತ ಭಾಷೆಯ ಪ್ರಯೋಗ ಮುಂದುವರಿದಿದೆ. ಭಾರತೀಯ ಬೌದ್ಧಿಕ ಜೀವನದ ಮಾಧ್ಯಮವಾಗಿ ಶತಮಾನಗಳಿಂದ ಇದೆ. ಅಧ್ಯಯನ, ಅಧ್ಯಾಪನದ ಮಾಧ್ಯಮವೂ ಆಗಿದೆ. ಯಾವ ಭಾರತೀಯ ಮನೀಷಿಯೇ ಆದರೂ, ವಿಷಯವನ್ನು ಶಬ್ದಬದ್ಧ ಮಾಡಬೇಕಾದರೆ ಸಂಸ್ಕೃತದ ಪದ್ಯ ಅಥವಾ ಗದ್ಯವನ್ನು ಆಶ್ರಯಿಸಬೇಕಾಗುತ್ತದೆ. ಅತ್ತ ಜೀವಂತ ಭಾಷೆಗಳಲ್ಲಿ ವೈಚಾರಿಕ ಗದ್ಯ ಪಲ್ಲವಿಸಲೇ ಇಲ್ಲ. ಹಾಗಾಗಿ ಸಂಸ್ಕೃತ ಜೀವನ್ಮೃತದಂತಾಯಿತು. ವ್ಯವಹಾರದೊಂದಿಗೆ ಅದರ ಸಂಬಂಧ ಕಡಿದು ಹೋಯಿತು. ಕೆಲವು ಉದಾಹರಣೆಗಳನ್ನು ನೋಡೋಣ. 'ಹರಿ' ಎಂಬ ಶಬ್ದಕ್ಕೆ ಹರಾ, ಲಾಲ್, ಭೂರಾ, ವಿಷ್ಣು, ಇಂದ್ರ, ಶಿವ, ಬ್ರಹ್ಮ, ಯಮ, ಸೂರ್ಯ, ಚಂದ್ರ, ಮನುಷ್ಯ, ಪ್ರಕಾಶ, ಕಿರಣ, ಬೆಂಕಿ, ಗಾಳಿ, ಸಿಂಹ, ಕುದುರೆ, ಕೋಗಿಲೆ, ಕಪ್ಪೆ, ಗಿಳಿ, ಹಾವು, ನವಿಲು, ಜ್ಞಾನೇಂದ್ರಿಯ ಇಷ್ಟೆಲ್ಲಾ ಅರ್ಥ ಕೊಡಲಾಗಿದೆ. ನೀರಿಗೆ, ಜಲ, ಉದಕ, ಆಪ್, ವಾರಿ, ಸಲಿಲ, ಪಯ, ಘೃತ, ಮಧು, ಸರ, ಪಾನೀಯ, ತೀರ್ಥ ಹೀಗೆ ಹಲವಾರು ಶಬ್ದಗಳು ಸಿಗುತ್ತವೆ. ನೀವು 'ನಾರಾಯಣ ತಣ್ಣೀರನ್ನು ಕುಡಿಯುತ್ತಾನೆ' ಎಂದು ಹೇಳಬೇಕಾದರೆ - 'ನಾರಾಯಣಃ ಶೀತಂ ಜಲಂ ಪಿಬತಿ', 'ನಾರಾಯಣೊ ಜಲಂ ಪಿಬತಿ ಶೀತಂ' ಮುಂತಾಗಿ ಒಟ್ಟು 4x3x2x1=24 ವಿಧಾನಗಳನ್ನು ಅನುಸರಿಸಬಹುದು. ಇದು ಭಾಷೆಯ ಸಮೃದ್ಧಿಯಲ್ಲ. ಇದು ಭಾಷೆಯಲ್ಲಿನ ಒಂದು ಅದ್ಭುತ ಸೃಜನ ಶಕ್ತಿ. ಯಾವ ಜೀವಂತ ಭಾಷೆಯೂ ಈ ಸ್ಥಿತಿಯನ್ನು ಸಹಿಸಲಾರದು. ಏಕೆಂದರೆ ದೈನಂದಿನ ವ್ಯವಹಾರ ಇದರಿಂದಾಗಿ ಕುಂಠಿತವಾಗುವುದು. ಈ ಪರಿಸ್ಥಿತಿಯಲ್ಲಿ ಈ

ಜೀವನ್ಮೃತ ಭಾಷೆ ಭಾರತೀಯ ಬೌದ್ಧಿಕ ಜೀವನದ ಒಂದೇ ಮಾಧ್ಯಮವಾದ್ದರಿಂದ ಶಬ್ದ ಮತ್ತು ಅರ್ಥಗಳ ಸಂಬಂಧ ಉಭಯದಿಶೆಯಲ್ಲಿರಲಿಲ್ಲ. ಬೌದ್ಧಿಕ ಜೀವನ ಮತ್ತು ಜೀವನ ವ್ಯವಹಾರ ಒಂದಕ್ಕೊಂದು ಹೊಂದಿಕೊಳ್ಳಲಿಲ್ಲ. ಚಂದ್ರ ದರ್ಶನ ಮತ್ತು ಚಂದ್ರನನ್ನು ನೋಡುವುದು ಇವುಗಳ ನಡುವೆ ಸಂಬಂಧ ಇಲ್ಲದಂತಾದುದು ಆಶ್ಚರ್ಯದ ಸಂಗತಿಯೇನಲ್ಲ. ನಿಧಾನವಾಗಿ ಭಾರತೀಯ ಬೌದ್ಧಿಕ ಜೀವನ ತೊಡಕಿಗೆ ಸಿಕ್ಕಿತು. (ಭಾರತದಲ್ಲಿ ಫಾರಸೀ-ಅರಬೀ ಭಾಷೆಗಳ ಸ್ಥಿತಿಯೂ ಕೊಂಚ ಹೀಗೆ ಇತ್ತು.) ಬ್ರಿಟಿಷರ ಆಳ್ವಿಕೆಯಿಂದಾಗಿ 'ದೇಸೀ' ಭಾಷೆಗಳ ಬಳಕೆ, ಅಧ್ಯಯನ, ಅಧ್ಯಾಪನ, ವಿಚಾರ ಪ್ರದರ್ಶನಗಳಿಗೆ ಆಗತೊಡಗಿತು. ಮತ್ತು ವಿಚಾರಗಳ ಸರಣಿ ಆಂಗ್ಲ ಭಾಷೆಯೊಂದಿಗೆ ಹೊಂದಿಕೊಂಡಿತು, ಬ್ರಿಟಿಷರ ವ್ಯವಹಾರದೊಂದಿಗಲ್ಲ. ಇದರ ಪರಿಣಾಮವಾಗಿ ಒಂದು ಹೊಸ ಜೀವನ್ಮೃತ ಭಾಷೆ ಬೌದ್ಧಿಕ ಜೀವನದ ಮಾಧ್ಯಮವಾಯಿತು. ಇದನ್ನು ನಾವು ಸಂಸ್ಕೃತದ ಪೋಷಾಕಿನಲ್ಲಿ ಆಂಗ್ಲ ಭಾಷೆ ಎನ್ನಬಹುದು. ಅಂತೂ ಬೌದ್ಧಿಕ ಜೀವನ ಪಲ್ಲವಿಸಲೇ ಇಲ್ಲ. ಅದು ನಿರಂತರವಾಗಿ ಬೌದ್ಧಿಕ ಗಿಳಿಪಾಠಕ್ಕೆ ಪರಿವರ್ತನೆಗೊಂಡಿತು. ಸರಕಾರಿ ಹಿಂದಿಯನ್ನು ಹೀಯಾಳಿಸುವುದು ಬುದ್ಧಿಜೀವಿಗಳಿಗೆ ಸುಲಭ. ಆದರೆ ವೈಚಾರಿಕ ಹಿಂದಿಯೇನೂ ಇದರಿಂದ ಹೊರತಲ್ಲ. ಅದನ್ನು ಈ ಬುದ್ಧಿಜೀವಿಗಳು ಹೇಗೆ ಹೀಯಾಳಿಸಿಯಾರು? ವೈಚಾರಿಕ ಹಿಂದಿಯಿಂದ ಬೇರೆಯಾಗಬೇಕಾದರೆ, ವಿಚಾರಗಳ ಅಭಾವವನ್ನು ಮುಚ್ಚಿಕೊಳ್ಳಲು ಇದಕ್ಕಿಂತ ಒಳ್ಳೆಯ ಸಲಕರಣೆ ಮತ್ತೊಂದೆಲ್ಲಿದೆ? ಅಲ್ಲದೆ ಹೀಯಾಳಿಸುವ ಕೆಟ್ಟ ಸಾಹಸ ಮಾಡುವುದಕ್ಕೂ ವೈಚಾರಿಕ ಹಿಂದಿಯನ್ನು ವ್ಯಂಗ್ಯ ಮಾಡಲೂ ಅದೇ ವೈಚಾರಿಕ ಹಿಂದಿಯನ್ನು ಆಶ್ರಯಿಸಬೇಕಾಗುತ್ತದೆ. (ಈ ಲೇಖಕನ ಅದೃಷ್ಟವೆಂದರೆ ಹಿಂದಿ ಶಿಕ್ಷಣ ಅಪೂರ್ಣವಾಗಿ ಪಡೆದದ್ದರಿಂದ ಇವನು ಪರಿನಿಷ್ಠಿತ ಹಿಂದಿಯ ಹೊರೆಯಿಂದ ಮುಕ್ತ.) ಇತರ ಆಧುನಿಕ 'ದೇಶೀ' ಭಾಷೆಗಳ ಸ್ಥಿತಿಯೂ ಸ್ವಲ್ಪ ಹೆಚ್ಚು ಕಡಿಮೆ ಹೀಗೆಯೇ ಇದೆ.

ಇರಲಿ, ನಮ್ಮ ಪ್ರಶ್ನೆಗಳನ್ನು ಮರೆಯಬೇಡಿ, ಪ್ರಥಮ ಪ್ರಶ್ನೆಗೆ ಉತ್ತರ ಹೀಗಿರಬಹುದು:

1. ಭಾಷೆಯಲ್ಲಿ ನಿಜಕ್ಕೂ ಒಂದು ಶಕ್ತಿ ಅವಶ್ಯವಿದೆ. ಭಾಷೆಯನ್ನು ಪ್ರಯೋಗದ ಹಂತದಲ್ಲಿ ಪರೀಕ್ಷಿಸಿದರೆ, ಶಬ್ದ ಪ್ರಯೋಗ ಶಬ್ದ ಶಕ್ತಿಯ ಆವಿಷ್ಕಾರ ಎನ್ನಿಸುತ್ತದೆ. ಹಾಗೆಯೆ, ವ್ಯವಸ್ಥೆಯ ಹಂತದಲ್ಲಿ ಪರೀಕ್ಷಿಸಿದರೆ ಭಾಷಾ-ವ್ಯವಸ್ಥೆ ಭಾಷಾಶಕ್ತಿಯ ಆವಿಷ್ಕಾರ ಎನ್ನಿಸುತ್ತದೆ.

2. ಭಾಷೆ ಅರ್ಥ - ಆಕಲನದ ಒಂದು ಮಾಧ್ಯಮ. ಶಬ್ದ ಮತ್ತು ಅರ್ಥಗಳು ಪರಸ್ಪರ ರೂಪಿಸಿಕೊಳ್ಳುತ್ತದೆ. ಭಾಷಾ ಪ್ರಯೋಗ ಮತ್ತು ಭಾಷಾ ವ್ಯವಸ್ಥೆಗಳೂ ಕೂಡ ಒಂದನ್ನೊಂದು ಘಟಿಸುವಂತೆ ಮಾಡುತ್ತವೆ.

3. ಯಾವುದೇ ಪರಿಸ್ಥಿತಿಯಲ್ಲಿ ಭಾಷಾ ಪ್ರಯೋಗದ ಹಂತದಲ್ಲಿ ಮತ್ತು ಅದರ ಪರಿಣಾಮವಾಗಿ ಭಾಷಾ ವ್ಯವಸ್ಥೆಯ ಹಂತದಲ್ಲಿ ಈ ಕೊಂಡಿ ಕಳಚಿಹೋದರೆ, ಭಾಷೆಯ ಸಂಬಂಧ ಜೀವನ ವ್ಯವಹಾರದಿಂದ ಬೇರ್ಪಡುತ್ತದೆ. ಈ ಬೇರ್ಪಡೆಯ ಪರಿಣಾಮ ಸಮಾಜದ ಹಿತಕ್ಕೆ ವಿರುದ್ಧವಾಗಿರುತ್ತದೆ.

ಈಗ ಎರಡನೇ ಪ್ರಶ್ನೆಗೆ ಹೊರಳೋಣ.

ಎರಡನೆ ಪ್ರಶ್ನೆ : ಪ್ರಭುತ್ವದೊಂದಿಗೆ ಭಾಷೆಯ ಸಂಬಂಧವಿದೆಯೇ? ಅಂದರೆ, ಭಾಷೆ ಯಾವುದಾದರೂ ಪ್ರಭುತ್ವದ ವಾಹನವಾಗಿ ಅಥವಾ ಪ್ರಭುತ್ವಾಕಾಂಕ್ಷೆಯ ಸಾಧನವಾಗಿ ಬಳಸಲ್ಪಡುತ್ತದೆಯೇ?

ಶಕ್ತಿಯೇ ಬೇರೆ, ಪ್ರಭುತ್ವವೇ ಬೇರೆ ಎಂಬುದು ಸ್ಪಷ್ಟ. ಶಕ್ತಿ ಏನಾದರೊಂದು ಮಾಡಲು ಅಥವಾ ಏನಾದರೂ ಬದಲಾವಣೆ ತರುವ ನೈಸರ್ಗಿಕ ಕ್ಷಮತೆ ಹೊಂದಿರುತ್ತದೆ. ಮನುಷ್ಯ ಏನಾದರೂ ಮಾಡಬಲ್ಲ ಆದರೆ ಮಾಡಲು ಮಾತ್ರ ಆಸಕ್ತಿಯಿಲ್ಲ, ಅಥವಾ ಮನುಷ್ಯ ಏನಾದರೂ ಮಾಡಬಯಸುತ್ತಾನೆ, ಆದರೆ ಮಾಡಲು ಶಕ್ತನಲ್ಲ ಎನ್ನುವಲ್ಲಿ ಶಕ್ತಿ ಮತ್ತು ಇಚ್ಛೆಯ ಅಸಂಬದ್ಧತೆಯ ಅನುಭವವಾಗುತ್ತದೆ. ಇಚ್ಛೆಯ ವಿಷಯದ ಬಗ್ಗೆ ಹೇಳುವುದಾದರೆ ಮನುಷ್ಯ ಸಮಾಜದಲ್ಲಿ ಎರಡು ವ್ಯವಸ್ಥೆಯ ವಿಶೇಷವನ್ನು ಕಾಣಬಹುದು. ತನ್ನ ಶಕ್ತಿ ಮತ್ತು ಇಚ್ಛೆಗನುಸಾರವಾಗಿ ಕೆಲಸ ಮಾಡಲಿ, ಬಿಡಲಿ ಇದೆಲ್ಲ ಸಮಾಜದೊಳಗೆ ಅವನ ಸಾಮರ್ಥ್ಯದ ಅಥವಾ ಕರ್ತವ್ಯದ ವಿಷಯವಾಗಿರುತ್ತದೆ. ಶಕ್ತಿ ಮತ್ತು ಇಚ್ಛೆ ಪ್ರಾಕೃತಿಕ ಮಟ್ಟದ ಅಥವಾ ವರ್ತನೆಯ ಮಟ್ಟದ ಮಾತಾದರೆ, ಅಧಿಕಾರ ಮತ್ತು ಕರ್ತವ್ಯ ಸಮಾಜದಲ್ಲಿ ಪರಿಭಾಷಿತ ಆಚಾರ ಧರ್ಮದ ಮಾತಾಗುತ್ತದೆ. (ಸಾಧಾರಣ ಧರ್ಮ ಅಥವಾ ನೀತಿ, ಅಥವಾ ಕಾಯಿದೆ, ಯಾವುದೇ ಸಂಪ್ರದಾಯದ ಸಂಕೇತ ಮತ್ತು ಕಟ್ಟುಪಾಡು ಮೊದಲಾದವು ಇಂತಹವೇ ಆಗಿವೆ.) ಹಕ್ಕು ಅಥವಾ ಕರ್ತವ್ಯದ ಯಾವುದೇ ಪರಿಭಾಷೆಯ ಮತ್ತು ವ್ಯಾಪ್ತಿಯ ಪ್ರಚುರತೆ ಯಾವ ಸಮಾಜದಲ್ಲಿದೆಯೋ, ಆ ಪರಿಭಾಷೆಯಲ್ಲಿ, ವ್ಯಾಪ್ತಿಯಲ್ಲಿ ಬದಲಾವಣೆ ತರುವ ಸಾಮರ್ಥ ಯಾವುದಾದರಲ್ಲಿ ಇರುವುದಾದರೆ ಆ ಸಾಮರ್ಥ್ಯದಿಂದ ಅದರ ಪ್ರಭುತ್ವ ಸಾಬೀತಾಗುತ್ತದೆ. ಯಾರಲ್ಲಿ ಪ್ರಭುತ್ವ ಇದೆಯೋ ಅವರಲ್ಲಿ ಬೇರೆಯವರ ಅಧೀನತೆಯೂ ಸ್ಪಷ್ಟವಾಗಿ ಗೋಚರವಾಗುತ್ತದೆ. ಅಂದರೆ ಯಾರದೇ ಪ್ರಭುತ್ವ ಬೇರೆಯವರ ಮೇಲೆ ಇರುತ್ತದೆ. ಹಾಗೆಯೇ ಯಾರದೇ ಅಧೀನತೆ ಕೂಡ ಬೇರೆಯವರ ಮೇಲಿರುತ್ತದೆ. (ಪ್ರಭುತ್ವ, ಸಾಂಪ್ರದಾಯಿಕ ಅಧೀನತೆ, ನಾಯಕ-ಅನುಯಾಯಿ ಸಂಬಂಧ ಮೊದಲಾದವು ಇದೇ ರೀತಿಯವು.) ಪ್ರಭುತ್ವ ಮತ್ತು ಅಧೀನತೆಯ ಹಂತಗಳು ಯಾವುದು? ಶಕ್ತಿ ಮತ್ತು ಇಚ್ಛೆಗೆ ಅನುಗುಣವಾಗಿ ಆಚಾರ ಧರ್ಮವನ್ನು ಅಳವಡಿಸುವುದು ಇಲ್ಲಿನ ವಿಷಯ.

ಶಕ್ತಿ ಮತ್ತು ಇಚ್ಛೆ, ಅಧಿಕಾರ ಮತ್ತು ಕರ್ತವ್ಯ, ಪ್ರಭುತ್ವ ಮತ್ತು ಅಧೀನತೆ ಇವೆಲ್ಲವೂ ಒಂದು ಸಮಾಜದಲ್ಲಿ ಹೆಣೆದುಕೊಂಡಿರುತ್ತದೆ. ಅದನ್ನೇ ಆ ಸಮಾಜದ ಪ್ರಭುತ್ವ ಕಾರಣ ಎನ್ನುವುದು. ರಾಜಕಾರಣವು ಇಂತಹುದೇ ಪ್ರಭುತ್ವಕಾರಣ. ಅದರಲ್ಲಿ `ರಾಜಧರ್ಮ`ವನ್ನು ಅಧಿಕಾರ ಮತ್ತು ಕರ್ತವ್ಯಕ್ಕೆ ಅನುಗುಣವಾಗಿ ಪರಿಭಾಷಿಸಲಾಗಿದೆ. ಗುಂಪುಗಾರಿಕೆ, ಏಕಾಧಿಕಾರತ್ವ ಅಥವಾ ದಂಗೆ ಏಳುವುದು ಇವು ಈ ಪ್ರಭುತ್ವಕಾರಣದ ಆಟಗಳು. ಪ್ರಜಾತಂತ್ರ, ಏಕಾಧಿಕಾರತ್ವ, ಅಥವಾ ಕ್ರಾಂತಿ ರಾಜಕಾರಣ ಅನ್ನಿಸಿಕೊಳ್ಳಲು ಯೋಗ್ಯವಾದವು. (1857ರ ದಂಗೆ ಮತ್ತು ಭಾರತೀಯ ಪ್ರಬೋಧನ (1820-1920)ದ ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜಕೀಯ ವಿದ್ರೋಹಗಳ ವಿಚಾರವನ್ನು ಈ ಸಂದರ್ಭದಲ್ಲಿ ಮಾಡಬಹುದು.)

ಈ ಹೆಣಿಗೆಯಲ್ಲಿ ಭಾಷಣ ಮತ್ತು ಭಾಷಾ ಪ್ರಯೋಗದ ಮಹತ್ವ ಏನು ಎಂಬುದನ್ನು ನೋಡೋಣ.

ಸಾಕ್ಷಿಯಾಗಿ ನಾವು ಬ್ರಿಟನ್ನಿನ ಹೌಸ್ ಆಫ್ ಕಾಮನ್ಸ್‌ನ ಒಬ್ಬ ಸದಸ್ಯನನ್ನು ತರೋಣ. ಸದನದಲ್ಲಿ ಕಮಿಶನ್ಡ್ ಆಫೀಸರ್ ಆಗಲು ಅರ್ಹತೆಯ ಬಗ್ಗೆ ಮಾತುಕತೆ ನಡೆಯುತ್ತಿತ್ತು. (ಪಾತ್ರತೆ ಅಂದರೆ ಅಧಿಕಾರ ಮತ್ತು ಕರ್ತವ್ಯವನ್ನು ಯಾರಿಗಾದರೂ ವಹಿಸುವಾಗ ಅವನ ಶಕ್ತಿ ಮತ್ತು ಇಚ್ಛೆ ಬಗ್ಗೆ ಸರ್ಕಾರದ ಕಡೆಯಿಂದ ನಡೆವ ಪರೀಕ್ಷೆ) ಆ ವ್ಯಕ್ತಿಯ ನಾಯಕತ್ವದ ಗುಣದ ಬಗ್ಗೆ ಪರೀಕ್ಷಿಸೋಣ ಎಂದು ಮಂತ್ರಿ ಹೇಳಿದರು. ಆಗ ಲೇಬರ್ ಪಾರ್ಟಿಯ ಒಬ್ಬ ಸಂಸತ್ತಿನ ಸದಸ್ಯ ವ್ಯಂಗ್ಯವಾಗಿ ಪ್ರಶ್ನಿಸಿದ - `ಹ್ಹಾ! ಈ ನಾಯಕತ್ವ ಗುಣಗಳನ್ನು ಅವನ ಭಾಷೆಯ ಸ್ವರ-ವರ್ಣಗಳನ್ನು ಕೇಳಿಯೇ ಪರೀಕ್ಷಿಸಲಾಗುತ್ತದಲ್ಲವೇ?`` ಆ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಆರ್. ಪಿ. ಅಥವಾ ಬಿ. ಬಿ. ಸಿ. ಉಚ್ಚಾರಣೆ (ಅಥವಾ ಯೂ ಶಬ್ದಾಂಕನ ಎಂದು ಹೇಳಲಾಗುತ್ತದೆ) ಎಂದೇನು ಹೇಳಲಾಗುತ್ತದೆ ಅದು ಬ್ರಿಟನ್ನಿನ ವರ್ಣ ವ್ಯವಸ್ಥೆಯನ್ನು ಪರಿಚಯಿಸುವಂಥದಾಗಿತ್ತು. ಉಚ್ಚವರ್ಗದ ಜನ, ತಮ್ಮ ಮಕ್ಕಳನ್ನು ಪಬ್ಲಿಕ್ ಸ್ಕೂಲ್, ಆಕ್ಸ್‌ಫರ್ಡ್, ಕೇಂಬ್ರಿಡ್ಜ್‌ಗೆ ಕಳುಹಿಸುತ್ತಿದ್ದರು. ಅದರ ಶೈಲಿಯಲ್ಲಿಯೇ ಸೈನ್ಯ, ಆಡಳಿತ, ಕೈಗಾರಿಕೆ ಮತ್ತು ವ್ಯಾಪಾರದ ಅಧಿಕಾರ-ಪದವಿಗಳು ಇರುತ್ತಿದ್ದವು. (ಬರ್ನಾರ್ಡ್ ಶಾನ `ಪಿಗ್ಮೆಲಿಯನ್` ನಾಟಕ ನೆನಪಿಸಿಕೊಳ್ಳಬಹುದು.) ಈ ಪ್ರಯೋಗದಿಂದ ಭಾಷಾ ಪ್ರಯೋಗ ಅಧಿಕಾರದ ವಾಹನ ಎಂದಾಗುತ್ತದೆ. ಸಾಧಾರಣ ಸೈನಿಕ ತನ್ನ ಆಫೀಸರನ ಬಾಯಿಂದ ಉಚ್ಚವರ್ಣೀಯ ಶಬ್ದಗಳ ಉಚ್ಚಾರಣೆ ಕೇಳಿದಾಗ ಅವನಿಗೆ ಆ ಆಫೀಸರನಲ್ಲಿರುವ ನಾಯಕತ್ವ ಶಕ್ತಿ ಬೆಳಕಿಗೆ ಬರುತ್ತದೆ.

ಭಾಷಾ ಪ್ರಯೋಗ ಪ್ರಭುತ್ವ ಸಾಧನ ಆಗಿರಬಹುದು. ಫ್ರೆಂಚ್ ಭಾಷೆಯ 'ಫಾಮ್' ಪದ, ಉರ್ದುವಿನ 'ಔರತ್' ಪದ, ಭಾರತೀಯ ಭಾಷೆಗಳ 'ಸ್ತ್ರೀ' ಶಬ್ದ ಕೇವಲ ನಾರಿ ಎಂಬ ಅರ್ಥದಲ್ಲಿ ಅಷ್ಟೇ ಅಲ್ಲದೆ 'ಪತ್ನಿ'ಯ ಅರ್ಥದಲ್ಲಿಯೂ ಪ್ರಯುಕ್ತವಾಗುತ್ತದೆ. ಹಾಗೆಯೇ ಜರ್ಮನ್ ಭಾಷೆಯ 'ಮಾನ್' ಅಥವ ಉರ್ದೂವಿನ 'ಮರ್ದ' ಕೇವಲ ಪುರುಷ ಎಂಬ ಅರ್ಥದಲ್ಲಿಯೇ ಅಲ್ಲ 'ಪತಿ' ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗುತ್ತದೆ. ಈ ಉದಾಹರಣೆಗಳ ಐತಿಹಾಸಿಕ ಮತ್ತು ಸಂಕಲ್ಪನಾತ್ಮಕ ತಪಾಸಣೆಯನ್ನೇನು ಹೆಚ್ಚಾಗಿ ನಾವು ಮಾಡುವುದಿಲ್ಲ. ಇಷ್ಟನ್ನು ಮಾತ್ರ ಇಲ್ಲಿ ಸೂಚ್ಯವಾಗಿ ಹೇಳುತ್ತೇವೆ - ನಾರಿ ಮತ್ತು ಪುರುಷನ ಬಗ್ಗೆ ಸಮಾಜದಲ್ಲಿ ಏನು ಸ್ಥಾನಮಾನ ಇದೆ ಎಂಬುದನ್ನು ಈ ಸಂಕೇತಗಳು ಚೆನ್ನಾಗಿ ಸಮಾಜಕ್ಕೆ ಮನದಟ್ಟು ಮಾಡಿಕೊಡುತ್ತವೆ. ಎಷ್ಟು ಚೆನ್ನಾಗಿ ಅಂದರೆ ಇವು ಅಧೀನರು ಮತ್ತು ಪ್ರಭುತ್ವ ಉಳ್ಳವರು ಇಬ್ಬರ ಬಗ್ಗೆಯೂ ಸಂಕೇತಿಸುತ್ತವೆ.

ಮೊದಲೇ ಹೇಳಿದಂತೆ ಭಾಷೆ ಅರ್ಥ-ಆಕಲನದ ಒಂದು ಮಾಧ್ಯಮ. ಭಾಷೆ ಕೇವಲ ಮಾಧ್ಯಮವಲ್ಲ, ಸಾಧನ ಕೂಡ, ಅರ್ಥ-ಸಂಜ್ಞಾಪನದ ಸಾಧನ. ಶಬ್ದ ಪ್ರಯೋಗದ ಹಿಂದೆ ಒಬ್ಬ ಸಂಜ್ಞಾಪಕ ಭಾಷಣಕಾರ ಅಥವಾ ಲೇಖಕನಾಗಿ ಇರುತ್ತಾನೆ ಮತ್ತು ಮತ್ತೊಬ್ಬ ಸಂಬೋಧಿಸಲ್ಪಟ್ಟವನೂ ಶ್ರೋತೃ ಅಥವಾ ಪಾಠಕನಾಗಿ ಇರುತ್ತಾನೆ. ಶಬ್ದ ಪ್ರಯೋಗದಲ್ಲಿ ಒಂದು ಶಬ್ದಾಂಕನ ಕೃತಿ ಇರುತ್ತದೆ. ಸಂಜ್ಞಾಪಕ ಭಾಷಾಗತ ಕ್ರಿಯೆ ನಡೆಸಿದರೆ ಸಂಬೋಧಿತನು ಭಾಷಾಗತ ಪ್ರತಿಕ್ರಿಯೆ ನೀಡುತ್ತಾನೆ. ಶಬ್ದಾಂಕನದ ಅನುಬಂಧ ಹೇಗೆ ವಾಸ್ತವ ಆಕಲನದ ಕಡೆಗಿರುತ್ತದೆಯೋ ಹಾಗೆಯೇ ಸಮಾಜ ಜೀವನದ ಕಡೆಗೂ ಇರುತ್ತದೆ. ಯಾರು ಯಾರೊಡನೆ ಹೇಗೆ ಮಾತನಾಡಬಲ್ಲ ಅಥವಾ ಮಾತನಾಡುತ್ತಾನೆ ಎಂಬುದು ಕೇವಲ ಶಕ್ತಿ ಮತ್ತು ಇಚ್ಛೆಯಿಂದಲೇ ನಿಯಂತ್ರಿಸಲ್ಪಡುವುದಿಲ್ಲ, ಆದರೆ ಅಧಿಕಾರ ಮತ್ತು ಕರ್ತವ್ಯ, ಪ್ರಭುತ್ವ ಮತ್ತು ಅಧೀನತೆಗಳಿಂದಲೂ ನಿಯಂತ್ರಿತಗೊಳ್ಳುತ್ತದೆ. ಉದಾಹರಣೆಗೆ - ಭಾರತದ ನಗರಗಳಲ್ಲಿ ದಾರಿಯಲ್ಲಿ ಅಪರಿಚಿತ ವ್ಯಕ್ತಿಗಳನ್ನು ಸಮಯವೆಷ್ಟು ಅಥವಾ ಕ್ರಿಕೆಟ್ ಸ್ಕೋರ್ ಎಷ್ಟೆಂದು ಕೇಳಬಹುದು (ಹವಾಮಾನ ಎಷ್ಟು ಚೆನ್ನಾಗಿದೆ ಎಂದು ಕೇಳುವುದಿಲ್ಲ.)

ಇನ್ನೂ ಆಳವಾಗಿ ನೋಡಿದರೆ ಪ್ರಭುತ್ವದ ಆಧಾರ ದಂಡನೀತಿ ಅಥವಾ ಬಲಪ್ರಯೋಗ, ಮತ್ತು ಬೆಲೆ ನೀತಿ ಅಥವಾ ಆರ್ಥಿಕ ಪ್ರಲೋಭನದ್ದಾಗಿರುತ್ತದೆ. ಆದರೆ ಅಧೀನತೆಯ ಆಧಾರ ಇಲ್ಲಿಗೇ ಸೀಮಿತವಲ್ಲ. ಈ ಆಧಾರ ಸಾಮ ನೀತಿ ಅಥವಾ ಶ್ರದ್ಧಾ ಪ್ರವರ್ತನ, ವಿವೇಕ ಪ್ರವರ್ತನ, ಭಾವಾವಿಷ್ಕಾರ ಮತ್ತು ಭಾವಜಾಗೃತಿಯೂ ಆಗಿರುತ್ತದೆ. (ವಿಚಾರ ಲಾಘವದ ದೃಷ್ಟಿಯಿಂದ ಭೇದನೀತಿ ಬೇರೆಯೇನಲ್ಲ, ಈ ಮೂರರಲ್ಲಿಯೇ ಸೇರಿ ಹೋಗಿರುತ್ತದೆ.) ಸಾಮ ನೀತಿಯಲ್ಲಿ ಭಾಷೆಗೆ ಸ್ಥಾನವಿದೆ. ಶ್ರದ್ಧಾ ಪ್ರವರ್ತನೆಯಲ್ಲಿ ಭಾಷಣಕಾರ ಕೇವಲ ಪ್ರಭುತ್ವ ಮುಕ್ತ ಮತ್ತು ಪ್ರಭುತ್ವಾಕಾಂಕ್ಷಿಯಾಗಿರುತ್ತಾನೆ ಎಂದು

ತಿಳಿಯುವುದು ಮತ್ತು ಅಧೀನತೆಯುಳ್ಳವರು ಅಥವಾ ಅಧೀನತಾಕಾಂಕ್ಷಿ ಕೇವಲ ಅವರಿಂದ ಅರ್ಥವಾದ ಕೇಳುತ್ತಾರೆ ಎಂದು ತಿಳಿಯುವುದೂ ಸರಿಯಲ್ಲ. ಭಾಷಾ ಪ್ರಯೋಗ ಮತ್ತು ಭಾಷಾ ವ್ಯವಸ್ಥೆಗಳೇ ಶ್ರದ್ಧಾಪ್ರವರ್ತನ ಮೊದಲಾದವುಗಳಿಗೆ ಸಶಕ್ತ ಆಧಾರವಾಗಿರುತ್ತವೆ - ದೈವಿಕತೆ, ದೈವಿವಿಧಿ, ನಿಯಮವನ್ನ ಪಾಲಿಸುವುದು, ವಿಜ್ಞಾಪನೆ-ವ್ಯವಹಾರ, ವಿಜ್ಞಾನ-ತಂತ್ರಜ್ಞಾನದ ಪ್ರಸಾರಣೆ, ವಿವಿಧ ಪ್ರಸಾರ ಮಾಧ್ಯಮಗಳು ಭಾಷೆಯ ಸಹಾಯದಿಂದ ನಡೆಯುತ್ತವೆ ಮತ್ತು ಪ್ರವರ್ತಿತವಾಗುತ್ತಿರುತ್ತವೆ. ಎಲ್ಲಿಯವರೆಗೆ ದಲಿತ ತನ್ನ ಭಾವಾವಿಷ್ಕಾರವನ್ನು 'ಚೋಮನ ದುಡಿ'ಯವರೆಗೆ ಸೀಮಿತಗೊಳಿಸಿರುತ್ತಾನೋ ಅಲ್ಲಿಯವರೆಗೆ ಸತ್ತಾ ಕಾರಣ ಅಥವಾ ಪ್ರಭುತ್ವಕಾರಣದಲ್ಲಿ ವ್ಯತ್ಯಾಸವಾಗುವುದಿಲ್ಲ. ಮಹಾರಾಷ್ಟ್ರದ ದಲಿತರು ತಮ್ಮ ಭಾವಾವಿಷ್ಕಾರ, ಭಾಷಾ ಪ್ರಯೋಗದಲ್ಲಿ (ಆತ್ಮವೃತ್ತ, ಕವಿತೆಗಳು, ಘೋಷಣೆಗಳು, ಭಾಷಣ ಮುಂತಾಗಿ) ಮತ್ತು ಭಾಷಾ ವ್ಯವಸ್ಥೆಯಲ್ಲಿ ಪರಿವರ್ತನೆಗಳ ('ಹರಿಜನ' ಪದ ಮತ್ತು ಕೆಲವು ನುಡಿಗಟ್ಟುಗಳನ್ನು ನಿಷೇಧಿಸಿದಾಗ) ಸಹಾಯದಿಂದ ಮಾಡತೊಡಗಿದಾಗ, ಪ್ರಭುತ್ವಕಾರಣದ ಒಳ ರಚನೆಯಲ್ಲಿ ಕೆಲವು ವ್ಯತ್ಯಾಸಗಳು ಭಾಸವಾಗತೊಡಗಿದವು. ಭಾಷೆಯು ತನ್ನದೇ ಆದ ಮಹಿಮೆ ಹೊಂದಿದೆ. ಈಗ ಭಾಷೆಯ ಜೊತೆಗೆ ಸಾಕ್ಷರತಾ ಪ್ರಸಾರವನ್ನೂ ತೆಗೆದುಕೊಳ್ಳಬೇಕು. ಡಾ. ಭೀಮರಾವ್ ಅಂಬೇಡ್ಕರ್ ಮತ್ತು ಪಾವ್ಲೊ ಫ್ರೆಯಿರೆಯವರು ಸಾಕ್ಷರತಾ ಪ್ರಸಾರ ಮತ್ತು ಶಿಕ್ಷಣ ಪ್ರಸಾರವನ್ನು ಸಾಮಾಜಿಕ ಪರಿವರ್ತನೆಯ ಒಂದು ಮಹತ್ವಪೂರ್ಣ ಸಾಧನವೆಂದು ಒಪ್ಪಿದ್ದಾರೆ. ಹಾಗೆ ಅವರು ಒಪ್ಪಿರುವುದು ಸರಿಯೇ ಆಗಿದೆ.

ಭಾಷೆಯ ಶಕ್ತಿಯ ಚಾಲನೆ ಸ್ವಗತ, ಅನ್ಯ ಸಂವಾದ ಮತ್ತು ಅನ್ಯೋನ್ಯ ಸಂವಾದದ ಕ್ರಮದಲ್ಲಿ ನಡೆಯುತ್ತದೆ ಎಂಬುದನ್ನು ನೋಡಿದೆವು. ಪ್ರಭುತ್ವಕಾರಣದಲ್ಲಿ ಭಾಷಾಗತ ಈ ಕ್ರಿಯೆ ಪ್ರತಿಕ್ರಿಯೆಗಳು ತೀರ ವಿರುದ್ಧ ಕ್ರಮದಲ್ಲಿ ನಡೆಯುತ್ತದೆ - ಅನ್ಯೋನ್ಯ ಪ್ರವರ್ತನ, ಅನ್ಯ ಪ್ರವರ್ತನ ಮತ್ತು ಸ್ವಪ್ರವರ್ತನ.

ಪತಿ-ಪತ್ನಿಯರ ನಡುವೆ ಈ ರೀತಿ ಸಂಭಾಷಣೆ ನಡೆದಿದೆ ಎಂದುಕೊಳ್ಳೋಣ - "ಇದರಲ್ಲಿ ತಪ್ಪು ನಿನ್ನದು" "ಇಲ್ಲ, ನಿಮ್ಮದೇ ತಪ್ಪು" ಇದು ಅನ್ಯೋಕ್ತಿ ಪ್ರವರ್ತನ. ಇಬ್ಬರಲ್ಲಿ ಒಬ್ಬರು ಸುಮ್ಮನಾದರು, ಮತ್ತೊಬ್ಬರು ಮಾತನಾಡುತ್ತಿದ್ದಾರೆ ಎಂದುಕೊಳ್ಳೋಣ - "ಇದರಲ್ಲಿ ನಿನ್ನದೇ ತಪ್ಪಿದೆ, ಏಕೆಂದರೆ ಅದು, ಆ ವಿಷಯ...." ಇದು ಅನ್ಯ ಪ್ರವರ್ತನ. ಸುಮ್ಮನಿದ್ದವ ಮನಸ್ಸಿನಲ್ಲೆ ಅಂದುಕೊಂಡ ಎಂದುಕೊಳ್ಳಿ - 'ಇದರಲ್ಲಿ ತಪ್ಪು ನನ್ನದೆ ಅಂತ ಕಾಣುತ್ತದೆ' - ಇದು ಸ್ವಪ್ರವರ್ತನ. ತನ್ನ ಪ್ರಭುತ್ವಾಕಾಂಕ್ಷೆಯ ಅಥವಾ ಅಧೀನತೆಯ ನೈತಿಕ ಸ್ವೀಕೃತಿಯಾಗುತ್ತದೆ, ಅದು ಬಹುಶಃ ಈ ರೀತಿಯ ಚಾಲನೆಯಿಂದಲೇ ಎಂದು ಕಾಣುತ್ತದೆ. ಮತ್ತೊಬ್ಬರಿಂದ ಕೇಳಿದ್ದು ಕೊನೆಗೆ ತನ್ನಿಂದಲೇ ಸ್ವೀಕಾರವಾಗುತ್ತದೆ.

ಬೇರೆಯವರ ಹಾಜರಿ ಅನಿವಾರ್ಯವಾಗುವುದೇ ಇಲ್ಲ. ಪ್ರಭುತ್ವಾಕಾಂಕ್ಷೆ ತನ್ನಾಕಾಂಕ್ಷೆಯ ನೈತಿಕ ಸ್ವೀಕಾರ ಮಾಡಿದಾಗ (ಅವು ಪ್ರಭುತ್ವಯುಕ್ತವೊ ಅಥವಾ ಪ್ರಭುತ್ವವಿಯುಕ್ತವೋ ಆಗಿರಲಿ) ಮತ್ತು ಅಧೀನತಾಯುತ ತನ್ನ ಅಧೀನತೆಯ ನೈತಿಕ ಸ್ವೀಕಾರ ಮಾಡಿದಾಗ, ಪ್ರಭುತ್ವಕಾರಣವನ್ನು ರಾಜಕಾರಣ ಎನ್ನಲಾಗುತ್ತದೆ. ಏಕೆಂದರೆ ಆಗಲೇ ಪ್ರಭುತ್ವಕಾರಣವನ್ನು ಆಚಾರ ಧರ್ಮವೆಂದು ಪರಿಭಾಷಿಸಲಾಗುತ್ತದೆ. ಹೀಗೆ ಪ್ರಭುತ್ವ ಮತ್ತು ಅಧೀನತೆಗಳ ವಿಭಜನೆಯಾಗುತ್ತದೆ. ದಂಡ ನೀತಿ ಮತ್ತು ದಾಮ ನೀತಿಯನ್ನು ಭಾಷಾಗತ ಪ್ರವರ್ತನದ ಸಾಮನೀತಿ ಪ್ರತಿಷ್ಠೆಯನ್ನು ಕೊಡುತ್ತದೆ. ಸಾಮ ನೀತಿಗೂ ಪ್ರತಿಷ್ಠೆಯ ಅವಶ್ಯಕತೆ ಇರುತ್ತದೆ. (ಪ್ರತಿಷ್ಠೆಯ ಸ್ಪರ್ಧೆಯೇ ಅಪ್ರತಿಷ್ಠೆ) ಶ್ರದ್ಧಾ ಪ್ರವರ್ತನ, ವಿವೇಕ ಪ್ರವರ್ತನ, ಭಾವಾವಿಷ್ಕಾರ, ಭಾವ ಜಾಗೃತಿಗಳಿಗೂ ಪ್ರತಿಷ್ಠೆಯ ಸಮರ್ಥನೆ ಬೇಕು, 'ಚೋಮನ ದುಡಿ'ಯಲ್ಲಿ ಈ ಪ್ರತಿಷ್ಠೆಯದೇ ಅಭಾವ. ಶ್ರದ್ಧೆಗಳ ಪ್ರತಿಷ್ಠೆಯನ್ನು ಕಿತ್ತುಕೊಂಡಾಗ ಅವು ಲೋಕ ಭ್ರಮೆಗಳಾಗುತ್ತವೆ. ಯಾವ ಭಾವಾವಿಷ್ಕಾರಗಳಿಗೆ ಪ್ರತಿಷ್ಠೆ ಸಿಕ್ಕಿದೆ ಅವನ್ನು ಸಮಾರಂಭ ಅಥವಾ ಶೋಕ ಪ್ರದರ್ಶನ ಎನ್ನುತ್ತಾರೆ. ಪ್ರಭುತ್ವಯುತನು ಒಮ್ಮೊಮ್ಮೆ 'ನನಗೆ ದುಃಖವಾಗುತ್ತದೆ' ಅಥವಾ 'ನಾನು ಕ್ಷಮೆ ಯಾಚಿಸುವೆ' ಎನ್ನುವುದು ಪ್ರತಿಷ್ಠಾನುಕೂಲ ಮತ್ತು ಅವಶ್ಯಕವಾಗುತ್ತದೆ. ಯಾರ ಹೆಸರನ್ನೂ ತೆಗೆದುಕೊಳ್ಳದಿರುವುದು ಅಥವಾ ಯಾರಿಗೂ ಗೌರವಾನ್ವಿತ ವ್ಯಕ್ತಿಯ ಹೆಸರಿಡುವ ಅಧಿಕಾರವನ್ನು ಕಿತ್ತುಕೊಳ್ಳುವುದು ಅಪ್ರತಿಷ್ಠೆಯ ಪ್ರತೀಕ; ಅದನ್ನೇ ಪ್ರಭುತ್ವ ವಿಯುತ್ತತೆ ಎನ್ನುತ್ತಾರೆ. ನಿಂದಿಸಿ ಯಾರಾದರೂ ಪ್ರಭುತ್ವವಿಯುತ ಅಥವಾ ಪ್ರಭುತ್ವಯುತರನ್ನು ಅಪ್ರತಿಷ್ಠರನ್ನಾಗಿ ಮಾಡುವುದು ದಂಡನೀತಿಯ ಪರ್ಯಾಯವಾಗಿದೆ. ಅನೇಕ ಬ್ರಿಟಿಷ್ ಅಧಿಕಾರಿಗಳು ಟಿಪ್ಪಣಿ ಬರೆದಿದ್ದಾರೆ. ಇಬ್ಬರು ಬ್ರಿಟಿಷರ ಜಗಳ ಎಷ್ಟು ಬೇಗ ಹೊಡೆದಾಟದಲ್ಲಿ ಪರಿಣಮಿಸುತ್ತದೋ, ಅಷ್ಟು ಬೇಗ ಇಬ್ಬರು ಭಾರತೀಯರ ಜಗಳ-ಬೈಗುಳ, ಬೆದರಿಕೆ ಮೊದಲಾದ ನಿಂದನೆಗಳ ದೀರ್ಘ ಅವಧಿಯು ಮುಗಿಯುವ ತನಕ ಹೊಡೆದಾಟದಲ್ಲಿ ಪರಿಣಮಿಸುವುದಿಲ್ಲ.

ಇಲ್ಲಿಯವರೆಗೆ ಪ್ರಭುತ್ವಕಾರಣದ ಸಂದರ್ಭದಲ್ಲಿ ಶಬ್ದ ಶಕ್ತಿ ಮತ್ತು ಶಬ್ದ ಪ್ರಯೋಗವನ್ನು ನೋಡಿದೆವು. ಮತ್ತೆ ಭಾಷಾ ಶಕ್ತಿ ಮತ್ತು ಭಾಷಾ ಪ್ರಯೋಗವನ್ನು ನೋಡಬೇಕಾಗಿದೆ. ಯಾವುದೇ ಭಾಷೆ ತನ್ನ ಭಾಷಾಶಕ್ತಿಗೆ ಒಳಪಡುವುದು ಕೂಡ ಪ್ರಭುತ್ವದ ಸಾಧನೆಯೇ ಆಗುತ್ತದೆ. ಪ್ರಾಚೀನ ಮತ್ತು ಮಧ್ಯಯುಗದ ಭಾರತದಲ್ಲಿ 'ಸ್ತ್ರೀ ಶೂದ್ರಾದಿ'ಗಳನ್ನು ಸಂಸ್ಕೃತ ಭಾಷೆಯ ತಿಳುವಳಿಕೆಯಿಂದ ವಂಚಿಸುವುದು ಪ್ರತಿಷ್ಠಿತ ಬೌದ್ಧಿಕ ಪ್ರವರ್ತನದಿಂದ ವಂಚಿಸುವುದಕ್ಕೆ ಸಮನಾಗಿದೆ. ಇಂದು ಭಾರತದಲ್ಲಿ ತಮ್ಮ ಮಕ್ಕಳನ್ನು ಇಂಗ್ಲೀಷ್ ಮಾಧ್ಯಮದ ವಿದ್ಯಾಲಯಗಳಿಗೆ ಕಳುಹಿಸಲು ಎಲ್ಲರೂ ಅದೆಷ್ಟು ಆತುರರಾಗಿದ್ದಾರೆ. ಅದಕ್ಕೆ ಅವರ ಪ್ರಕಾರ ಎರಡು ಬೇರೆ ಬೇರೆ ಪ್ರಭುತ್ವ ಪ್ರಯೋಜನಗಳಿರಬಹುದು - ಪ್ರಭುತ್ವಯುತರು ತಮ್ಮನ್ನು ಬೇರ್ಪಡಿಸಿಕೊಳ್ಳಲು ಮತ್ತು ಪ್ರಭುತ್ವವಿಯುತರಿಗೆ ಪ್ರತಿಷ್ಠಿತ

ಸಂಜ್ಞಾಪನವಾಹಿನಿ ಮತ್ತು ಪ್ರಭುತ್ವ ಪದವನ್ನು ತಿರಸ್ಕರಿಸಲು ಬಯಸುತ್ತಾರೆ. ಇದರ ವಿರುದ್ಧ ದಿಶೆಯಲ್ಲಿ ಪ್ರಭುತ್ವವಿಯುತರು ಯೋಚಿಸುತ್ತಾರೆ - ಇದರಿಂದ ಶಿಕ್ಷಣ, ಆದೇಶಗಳ ಅರಿವು, ಪ್ರಸಾರ ಮಾಧ್ಯಮ, ಅಧಿಕಾರ ಪದ, ಬದುಕು, ವಾಣಿಜ್ಯ ಅನುಕೂಲಗಳು ಸಿಗಲಿ ಎಂದು.  ಆದರೆ ಪ್ರಭುತ್ವವಿಯುತರು ಇದರಿಂದ ಪ್ರಭುತ್ವಾಕಾಂಕ್ಷೆಯ ಆವಿಷ್ಕಾರವನ್ನೇ ಮಾಡುತ್ತಾರೆ ಎಂದೇನೂ ಇಲ್ಲ. ಇಂಗ್ಲೀಷ್ ಭಾಷೆಯ ಜ್ಞಾನದ ವ್ಯಾಪ್ತಿ ಅವರು ಅಧೀನತೆಯನ್ನು ಸ್ವೀಕರಿಸುವುದರ ಆವಿಷ್ಕಾರ ಆಗಬಹುದು. ಮಧ್ಯ ಯುಗದ ಭಾರತದಲ್ಲಿ ಫಾರಸಿ ಭಾಷೆಯ ಜ್ಞಾನದ ಸ್ಥಿತಿ ಸ್ವಲ್ಪ ಮಟ್ಟಿಗೆ ಇದೇ ಆಗಿದೆ. ಆಧುನಿಕ ಭಾರತದ ಪ್ರಭುತ್ವಕಾರಣದಲ್ಲಿ ಹಿಂದಿ ಜ್ಞಾನದ ಸ್ಥಾನ ಏನು? ಇತಿಹಾಸದ ಒಂದು ತಿರುವಿನಲ್ಲಿ ಅದನ್ನು ರಾಜಕಾರಣದ ಒಳಗೆ ಭಾರತೀಯ ಏಕಾತ್ಮತೆಯ ವಾಹಕವಾಗಿ ಮತ್ತು ಸಾಧನವಾಗಿ ನೋಡಲಾಯಿತು. ಇನ್ನೂ ಮುಂದಿನ ತಿರುವಿನಲ್ಲಿ ಅದನ್ನು ಕೇವಲ ಪ್ರಭುತ್ವಕಾರಣದೊಳಗೆ ಹಿಂದಿ ಸಾಮ್ರಾಜ್ಯದ ವಾಹಕವಾಗಿ ಮತ್ತು ಸಾಧನದ ರೂಪದಲ್ಲಿ ನೋಡಲಾಯಿತು. ಅದಕ್ಕೆ ವಾಸ್ತವದ ಆಧಾರವೂ ಇದೆ. ತೀವ್ರ ಟೀಕೆಯ ನಂತರ ಇದರಲ್ಲಿ ಆವಿಷ್ಕೃತ ಪ್ರಭುತ್ವಾಕಾಂಕ್ಷೆ ಸಾಕಷ್ಟು ಮಂದಗತಿಯಾಯಿತು. ಆದರೂ ಚಲನಚಿತ್ರ ಪ್ರಸಾರಣ, ದೂರದರ್ಶನದ ರಾಷ್ಟ್ರವ್ಯಾಪ್ತಿ ಕಾರ್ಯಕ್ರಮ, ರಾಷ್ಟ್ರೀಯ ಪರಿಸಂವಾದ ಮುಂತಾದವುಗಳ ಮೂಲಕ ಈ ಸಾಮ್ರಾಜ್ಯವಾದ ಈಗಲೂ ತನ್ನ ಪರಿಚಯವನ್ನು ಅಲ್ಪ ಸ್ವಲ್ಪ ಕೊಡುತ್ತಿರುತ್ತದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಅಮೆರಿಕಾದ ಆಚಾರ-ವಿಚಾರ, ನಡೆ-ನುಡಿ, ಭಾವ ಭಂಗಿ ಇವುಗಳು ಭಾಷೆಯ ಮೂಲಕ ಏನು ಪ್ರಸಾರಣಗೊಳ್ಳುತ್ತಿವೆ, ಅನುಕರಣಗೊಳ್ಳುತ್ತಿವೆ, ಅವುಗಳ ನೇರ ಸಂಬಂಧವನ್ನು ಪ್ರಭುತ್ವಾಕಾಂಕ್ಷೆ ಮತ್ತು ಅಧೀನತೆಯ ಸ್ವೀಕಾರ ಅಂದರೆ ಪ್ರಭುತ್ವಕಾರಣದೊಂದಿಗೆ ಕೂಡಿಸಬಹುದಾಗಿದೆ.

ಹಾಗಾದರೆ ನಮ್ಮ ಎರಡನೇ ಪ್ರಶ್ನೆಯ ಉತ್ತರ ಹೀಗಿದೆ :

(1) ಶಕ್ತಿ ಮತ್ತು ಇಚ್ಛೆ, ಅಧಿಕಾರ ಮತ್ತು ಕರ್ತವ್ಯ, ಪ್ರಭುತ್ವ ಮತ್ತು ಅಧೀನತೆ (ಮತ್ತು ಇವೆರಡರ ನೈತಿಕ ಸ್ವೀಕಾರ) ಇವುಗಳೆಲ್ಲದರಿಂದ ಪ್ರಭುತ್ವಕಾರಣ (ಮತ್ತು ಅದರೊಳಗೆ ರಾಜಕಾರಣ)ದ ವಸ್ತ್ರ ನೇಯಲ್ಪಡುತ್ತದೆ.

(2) ಭಾಷೆ ಕೇವಲ ಅರ್ಥ-ಆಕಲನದ ಮಾಧ್ಯಮವಲ್ಲ, ಅದು ಅರ್ಥ-ಸಂಜ್ಞಾಪನದ ಸಾಧನವೂ ಹೌದು. ಅದ್ದರಿಂದ ಭಾಷೆ ಸ್ವಾಭಾವಿಕವಾಗಿಯೆ ಸಮಾಜ-ಜೀವನದೊಂದಿಗೆ ಮತ್ತು ಇದರೊಳಗೆ-ಪ್ರಭುತ್ವಕಾರಣದೊಂದಿಗೂ ಸಂಬಂಧವಿಟ್ಟುಕೊಳ್ಳುತ್ತದೆ.

(3) ಭಾಷೆಯ ಪ್ರಯೋಗದ ಅವಧಿಯಲ್ಲಿ ಭಾಷಾಗತ ಪ್ರವರ್ತನ ಪ್ರಭುತ್ವದ ಆಧಾರಗಳೊಡನೆ ಒಂದಾಗುತ್ತದೆ.

(4) ಭಾಷಾಜ್ಞಾನದ ಉಪಲಬ್ಧತೆ ಮತ್ತು ಅನುಪಲಬ್ಧತೆ ಪ್ರಭುತ್ವದ ವಾಹಕ ಅಥವಾ ಸಾಧನವಾಗಬಲ್ಲದು.

ಭಾಷೆಯೊಳಗಿನ ಶಕ್ತಿ ಮತ್ತು ಪ್ರಭುತ್ವಕಾರಣಕ್ಕಿಂತ ಹೆಚ್ಚಾಗಿ ಭಾಷೆಯ ಸ್ಥಾನದ ಬಗ್ಗೆ ಎರಡು ಪ್ರಶ್ನೆಗಳನ್ನು ಎತ್ತಲಾಗಿದೆ, ಅವನ್ನು ಬೇರೆಯವುಗಳೊಡನೆ ಸೇರಿಸ ಲಾಗುವುದಿಲ್ಲವೇ? ಏಕಿಲ್ಲ, ಅವನ್ನು ಸೇರಿಸಬಹುದು.

ಮೂರನೆ ಪ್ರಶ್ನೆ : ಭಾಷಾ ಶಕ್ತಿಯ ಯೋಗ್ಯ ಆವಿಷ್ಕಾರ ಪ್ರಭುತ್ವಕಾರಣದ ಯೋಗ್ಯ ಚಲನೆಗೆ ಸಹಾಯಕವಾಗುವುದಿಲ್ಲವೇ? ಭಾಷಾ ಶಕ್ತಿ, ಭಾಷಾ ಪ್ರಭುತ್ವಕಾರಣವನ್ನು ರಾಜಕಾರಣದ ಕಡೆಗೆ ಸೆಳೆಯಲು ನಮಗೆ ಸಹಾಯ ಮಾಡಬಲ್ಲುದೆ?

ಬೀಜರೂಪವಾಗಿ ಈ ಪ್ರಶ್ನೆಗೆ ಸಂಕ್ಷಿಪ್ತ ಉತ್ತರವನ್ನು ನಾವಾಗಲೇ ಸೂಚಿಸಿದ್ದೇವೆ. ಸಂಸ್ಕೃತ ಭಾಷೆಯ ಅಧ್ಯಯನ ಮತ್ತು ಉಪಯೋಗವನ್ನು ಪ್ರಭುತ್ವವಿಯುತರಿಗೆ ತಿರಸ್ಕರಿಸುವುದು ಮತ್ತು ಪ್ರಭುತ್ವಯುತರ ಬೌದ್ಧಿಕ ವ್ಯವಹಾರವನ್ನು ಸಂಸ್ಕೃತದಂತಹ ಜೀವನ್ಮೃತ ಭಾಷೆಯವರೆಗೆ ಸೀಮಿತಗೊಳಿಸುವುದು ಇದರಿಂದ ಎಷ್ಟು ಪ್ರಭುತ್ವವಿಯುತರಿಗೆ ನಷ್ಟವಾಗಿತ್ತೋ ಅದಕ್ಕಿಂತ ಹೆಚ್ಚು ಪ್ರಭುತ್ವಯುತರಿಗೆ ನಷ್ಟವಾಗಿದೆ. 17ನೇ ಶತಮಾನದ ಭಕ್ತ ಕವಿ ತುಕಾರಾಮ ಹೇಳುತ್ತಾನೆ - ನಾನು ಸಣ್ಣ ಜಾತಿಯಲ್ಲಿ ಹುಟ್ಟಿದುದು ಒಳ್ಳೆಯದೇ ಆಯಿತು. ಸಂತ ಕಬೀರ ಕೂಡ ಒಮ್ಮೆ ಇಂತಹದೇ ಭಾವವನ್ನು ವ್ಯಕ್ತಪಡಿಸಿದ್ದಾನೆ. (ಇಲ್ಲಿ ನನಗೆ ವರ್ಜೀನಿಯ ವುಲ್ಫ್ 'ಎ ರೂಮ್ ಆಫ್ ಒನ್ಸ್ ಓನ್'ನಲ್ಲಿ ಹೇಳಿರುವ ಮಾತು ನೆನಪಾಗುತ್ತದೆ - "It is unpleasant to be locked out - it is worse, perhaps to be locked in") ಇದೇ ರೀತಿಯ ನಷ್ಟವನ್ನು ಸಂಸ್ಕೃತದ ಸಮವಸ್ತ್ರದಲ್ಲಿನ ಇಂಗ್ಲೀಷ್ ಆಧುನಿಕ ಕಾಲದಲ್ಲಿ ಮಾಡುತ್ತಿದೆ. ಇತ್ತೀಚೆಗೆ ಇಂಗ್ಲೀಷ್ ಮಾಧ್ಯಮ ಶಾಲೆಗಳ ಜನಪ್ರಿಯತೆಯಿಂದಾಗಿ ಒಂದು ಹೊಸ ಪೀಳಿಗೆ ಸೃಷ್ಟಿಯಾಗುತ್ತಿದೆ. ಅದು ಸರಿಯಾಗಿ ಸ್ವಭಾಷೆಯಲ್ಲೂ ಕೆಲಸ ಮಾಡಲಾಗದ ಮತ್ತು ಇಂಗ್ಲೀಷ್ ಭಾಷೆಯನ್ನು ಜ್ಞಾನ ಮಾಧ್ಯಮವಾಗಿ ಬಳಸಲಾಗದಂತಹ ಸ್ಥಿತಿಯಲ್ಲಿದೆ. ಕೇವಲ ಪ್ರಭುತ್ವಕಾರಣದ ಆಟ ಆಡುವವರಿಗೆ ಇದು ಒಂದು ಸುವರ್ಣಾವಕಾಶ.

ಪ್ರತಿಷ್ಠಿತ ವಿಚಾರ-ಭಾಷೆಯ ಸಂಬಂಧ ದೈನಂದಿನ ಆಡುಭಾಷೆಯೊಡನೊಡಗೂಡಿರಲಿ. ಹಾಗೆಯೇ ಪ್ರತಿಷ್ಠಿತ ಭಾವ-ಭಾಷೆಯ ಸಂಬಂಧ ದೇಶೀ ಆಡು ಭಾಷೆಯೊಡಗೂಡಿರಲಿ. ಹೀಗೆ ನಮ್ಮ ವೈಚಾರಿಕ ಜೀವನ, [illegible]-ಜೀವನ ಮತ್ತು ಭಾವ ಜೀವನದ ಆರೋಗ್ಯ ಗಟ್ಟಿಗೊಳ್ಳಲಿ. ನಮ್ಮ ಪರಿಸಂವಾದಿಗಳು ಪರಸ್ಪರವಾಗಲಿ ಅಥವಾ ವಾಸ್ತವಿಕ ಜೀವನ ದಲ್ಲಾಗಲಿ ಸಂವಾದವಿಡುವುದಿಲ್ಲ, ಇದು ಸರಿಯಲ್ಲ. ನಮ್ಮ ವಿಚಾರಗಳು, ನಂಬಿಕೆಗಳು,

ಭಾವಭಂಗಿಗಳು ಪರಸ್ಪರ ಹಕ್ಕುದಾರರಾಗುವ ಬದಲು ಪರಸ್ಪರ ಬಂಧಿಗಳಾಗುವುದು ಸರಿಯಲ್ಲ. ಭಾರತದ ಎಲ್ಲ ಮೂಲೆಗಳ ಚಲನಚಿತ್ರಗಳು ಹಿಂದಿ ಚಲನಚಿತ್ರಗಳ ಅನುಕೃತಿಗಳಾಗುವುದೂ ಸರಿಯಲ್ಲ, ಇಡೀ ಪ್ರಪಂಚದ ಸಂಸ್ಕೃತಿ ಅಮೆರಿಕೆಯ ಸಂಸ್ಕೃತಿಯೊಳಗೆ ಬೆರೆತು ಹೋಗುವುದು ಸರಿಯಲ್ಲ, ಇದರಿಂದ ನಮಗಿಂತ ಅಮೆರಿಕನ್ನರಿಗೆ ಹೆಚ್ಚು ಹಾನಿಯಾಗುವುದು.

ನಾವಿಲ್ಲಿ ಸ್ವದೇಶೀತನದ ಘೋಷಣೆ ಮಾಡುತ್ತಿಲ್ಲ. ನಮಗೆ ಪಶ್ಚಿಮದ ಕಿಟಕಿಗಳು ಅವಶ್ಯ ತೆರೆದಿರಲಿ, ಆದರೆ ಅದರಿಂದ ಇಣುಕಿ ನೋಡುವ ನೋಟ ಮಾತ್ರ ನಮ್ಮದಾಗಿರಲಿ. ಕೇವಲ ಪಶ್ಚಿಮದ್ದೆ ಅಲ್ಲ, ಎಲ್ಲ ದಿಕ್ಕಿನ ಕಿಟಕಿಗಳೂ ತೆರೆದಿರಬೇಕು. ವಿಚಿತ್ರದ ಸಂಗತಿಯೆಂದರೆ ಪ್ರಾಚೀನ ಕಾಲದಲ್ಲಿ ಚೀನಿಯರು ಅನೇಕ ಭಾರತೀಯ ಗ್ರಂಥಗಳನ್ನು ಚೀನಿ ಭಾಷೆಗೆ ಅನುವಾದಿಸಿಕೊಂಡಿದ್ದರು. ಆದರೆ ಚೀನೀ ಗ್ರಂಥಗಳ ಭಾರತೀಯ ಭಾಷೆಗೆ ಅನುವಾದವನ್ನು ನಾವು ಉಚಿತವೆಂದು ತಿಳಿಯಲಿಲ್ಲ. ಮಧ್ಯಯುಗದ ಅರಬರ ಜೊತೆಗೂ ಹೀಗೇ ಆಯಿತು. ವಿಚಾರಗಳ ನವನವೀನ ಆವಿಷ್ಕಾರಗಳು, ನವನವೀನ ಭಾವ ಭಂಗಿಗಳ ಪರಿಷ್ಕರಣ, ಶಬ್ದಾರ್ಥ ಸಂಬಂಧಗಳ ಹೊಸ ಹೊಸ ಕಲ್ಪನೆಗಳ ಹುಟ್ಟು ಆಗುತ್ತಲೇ ಇರಬೇಕು.

ನಮ್ಮ ಬೇಡಿಕೆ ವಿಚಾರಗಳ ಸ್ವಾತಂತ್ರ್ಯ ಮತ್ತು ಭಾವಭಂಗಿಗಳ ಸ್ವಂತಿಕೆಗಾಗಿ, ಈ ಪ್ರಬಂಧವನ್ನೆ ಉದಾಹರಣೆಗೆ ತೆಗೆದುಕೊಳ್ಳಿ. 'ಲಾಂಗ್ವೇಜ್ ಆ್ಯಸ್ ಎಂಪವರ್‌ಮೆಂಟ್' ವಿಷಯವಾಗಿ ಬರೆಯಬೇಕೆಂದು ಕೇಳಿಕೊಳ್ಳಲಾಯಿತು. ನಾವು 'ಪವರ್' ಬಗ್ಗೆ ಹಿಂದಿ ಭಾಷೆಯಲ್ಲಿ ಯೋಚಿಸಿದಾಗ ಎರಡು ಬೇರೆ ಪರಿಕಲ್ಪನೆಗಳು 'ಶಕ್ತಿ' ಮತ್ತು ಪ್ರಭುತ್ವ ಅಥವಾ 'ಸತ್ತಾ' ನಮ್ಮ ಮುಂದೆ ಎದುರಾದವು. ಇವು ಇಂಗ್ಲೀಷಿನ ಒಂದೇ ಸಂಜ್ಞೆಯಿಂದ ಶಬ್ದಾಂಕಿತವಾದುವು. ಮುಂದೆ ನಾವು ಈ ಎರಡೂ ಪರಿಕಲ್ಪನೆಗಳ ಸಂಬಂಧವನ್ನು ಭಾಷೆಯೊಡನೆ ಹೊಂದಿಸಲು ಹೋದಾಗ ಎರಡು ಶಬ್ದಗಳ ಸಂಬಂಧಗಳು ಕಂಡವು - 'ಪವರ್ ಆಫ್ ಲಾಂಗ್ವೇಜ್' ಮತ್ತು 'ಲಾಂಗ್ವೇಜ್ ಇನ್ ಪವರ್'. ಇದೇ ರೀತಿಯ ಸ್ಥಿತಿ ಹಿಂದಿ ಪದ 'ರಾಜನೀತಿ'ಯದು. ಅದು ಮೂರು ಭಿನ್ನ ಅರ್ಥಗಳಲ್ಲಿ ಪ್ರಯುಕ್ತವಾಗುತ್ತದೆ. ನೀವು ಗಮನಿಸಿರಬಹುದು, ನಾವು ಈ ಮೂರೂ ಅರ್ಥದಲ್ಲಿ ಮರಾಠಿಯಲ್ಲಿ ಪ್ರಯುಕ್ತವಾಗುವ ರಾಜನೀತಿ (ಸಾಮ, ದಾಮ, ದಂಡ, ಭೇದ ಮತ್ತು ನೀತಿ) ಪ್ರಭುತ್ವಕಾರಣ, ಮತ್ತು 'ರಾಜಕಾರಣ' (ಆ ಶಬ್ದವನ್ನು ಬಹುಶಃ ೧೭ನೇ ಶತಮಾನದಲ್ಲಿ ಮರಾಠಿ ಭಕ್ತ ಕವಿ ರಾಮದಾಸನು ಬಳಸಿದ್ದು) ಪದಗಳನ್ನು ಬಳಸಿದ್ದೇವೆ. ಇದರಿಂದ ವಿಚಾರಗಳಲ್ಲಿ ಸ್ಪಷ್ಟತೆ ತರಲು ಸಹಾಯಕವಾಗುತ್ತದೆ ಎಂದು ಭಾವಿಸುತ್ತೇವೆ. ಬಹುಭಾಷತ್ವ ಸ್ವತಃ ಒಂದು ವಿಚಾರೋತ್ತೇಜಕ ಶಕ್ತಿಯಾಗಬಹುದು. ಭಾಷೆ ಅನುವಾದಗ್ರಸ್ತವಾಗುವಂತೆ ಅದು ಅನುವಾದ ಪುಷ್ಟವೂ ಆಗಬಹುದು.

ಇನ್ನೂ ಆಳವಾಗಿ ಯೋಚಿಸಿದರೆ ಎರಡು ವಿಷಯಗಳು ಕಂಡು ಬರುತ್ತವೆ. ಅವನ್ನು ನಿಮ್ಮ ಮುಂದಿಡುವೆ.

ಮೊದಲು ಶ್ರದ್ಧಾ ಪ್ರವರ್ತನ ಮತ್ತು ವಿಚಾರ ಪ್ರವರ್ತನದ ಬಗ್ಗೆ. (ಶ್ರದ್ಧೆ ಮತ್ತು faithನಲ್ಲಿ ಅಂತರವಿರುವುದು ಗಮನದಲ್ಲಿರಲಿ. ಮತ್ತು ವಿವೇಕ ಮತ್ತು ರೀಸನ್‌ನಲ್ಲಿಯೂ) ಇವೆರಡು ಪ್ರಭುತ್ವಕಾರಣದಲ್ಲಿ ಪ್ರವರ್ತನ-ಕ್ರಿಯೆಗಳ ಕೊಡುಗೆ. ಅದರಲ್ಲೂ ವಿಶೇಷವಾಗಿ ಪ್ರಭುತ್ವಕಾರಣವನ್ನು ರಾಜಕಾರಣದ ಕಡೆಗೆ ಸೆಳೆಯುವುದರಲ್ಲಿ. ಶ್ರದ್ಧೆಗೆ ವಿವೇಕ ಪ್ರತಿಸ್ಪರ್ಧಿಯಲ್ಲ. ಶ್ರದ್ಧೆ, ಅಂಧಶ್ರದ್ಧೆಯಾಗದಂತೆ ಇರಲು ವಿವೇಕ ಮನುಷ್ಯನಿಗೆ ಅತ್ಯಂತ ಆವಶ್ಯಕ. ಶ್ರದ್ಧೆಗೆ ಪ್ರತಿಸ್ಪರ್ಧಿ ಸಂದೇಹ. ವಿಕಲ್ಪ ಅಂದರೆ ಅಶ್ರದ್ಧೆ. ಸಂದೇಹ ಅಸಂದೇಹವಾಗದಿರಲು ವಿವೇಕ ಆವಶ್ಯಕ. ವಿವೇಕದ ಪ್ರತಿಸ್ಪರ್ಧಿ ಅವಿವೇಕ.

ಶ್ರದ್ಧೆಯ ಸ್ಪರ್ಧೆ ಸಂದೇಹದೊಂದಿಗೆ ಮತ್ತು ವಿವೇಕದ ಸ್ಪರ್ಧೆ ಅವಿವೇಕದೊಂದಿಗೆ. ಇವೆರಡೂ ಬೇರೆ ವಿಷಯಗಳು. ಮುಖ್ಯ ವಿಷಯವೆಂದರೆ ಶ್ರದ್ಧೆ ವಿವೇಕದ ಸಹಾಯ ಪಡೆಯುತ್ತದೆಯೋ ಅಥವಾ ಅವಿವೇಕದ ಸಹಾಯ ಪಡೆಯುತ್ತದೆಯೋ ಎಂಬುದು. ಇದೇ ಮಾತು ಅಶ್ರದ್ಧೆಗೂ ಅನ್ವಯಿಸುತ್ತದೆ. ಶ್ರದ್ಧಾ ಪ್ರವರ್ತನೆಯು ಮುಖ್ಯವಾಗಿ ರಹಸ್ಯೀಕರಣ ಅಥವಾ ಮಿಸ್ಟಿಫಿಕೇಶನ್ ಕಡೆಗಿರುತ್ತದೆ. ಆದರೆ ಈ ರಹಸ್ಯ ಸ್ವೀಕಾರ ಅವಿವೇಕವಾದಾಗ, ನಾವು ಸಂದೇಹವನ್ನಾಶ್ರಯಿಸಬೇಕಾಗುತ್ತದೆ. ಸಂದೇಹ ಮುಖ್ಯವಾಗಿ ರಹಸ್ಯೋಚ್ಚಾಟನೆ ಅಂದರೆ ಡಿಮಿಸ್ಟಿಫಿಕೇಶನ್ ಕಡೆಗೆ ವಾಲಿರುತ್ತದೆ. ಈ ರಹಸ್ಯೋಚ್ಚಾಟನೆಯ ಪ್ರೇರಣೆ ಅವಿವೇಕವಾದಾಗ ನಾವು ವಿವೇಕವನ್ನಾಶ್ರಯಿಸಬೇಕಾಗುತ್ತದೆ. ('ಈ ರಹಸ್ಯೋಚ್ಚಾಟನೆ ಪತ್ರಿಕೋದ್ಯಮಕ್ಕೂ ಅನ್ವಯಿಸುತ್ತದೆ.)

ರಹಸ್ಯ ಸ್ವೀಕಾರ ಪ್ರಭುತ್ವದ ಪ್ರತಿಷ್ಠೆಯನ್ನು ಹೆಚ್ಚಿಸುತ್ತದೆ. ಹಾಗೆಯೆ ರಹಸ್ಯೋಚ್ಚಾಟನೆ ಪ್ರಭುತ್ವದ ಪ್ರತಿಷ್ಠೆಯನ್ನು ಕುಗ್ಗಿಸುತ್ತದೆ. ಪ್ರಭುತ್ವಕಾರಣವನ್ನು ಪರಿಷ್ಕರಿಸುವಾಗ ರಹಸ್ಯ ಸ್ವೀಕಾರ ಶ್ರದ್ಧಾಪ್ರವರ್ತನೆಗೆ ಸಹಾಯಕವಾಗಿರುತ್ತದೆ, ರಹಸ್ಯೋಚ್ಚಾಟನೆ ವಿವೇಕ ಪ್ರವರ್ತನೆಗೆ ಸಹಾಯಕವಾಗಿರುತ್ತದೆ. (ಎಂಥ ವಿಡಂಬನೆ-ವಿಜ್ಞಾನದ ಪ್ರತಿಷ್ಠೆ ಹೆಚ್ಚಿಸಲು ಅದನ್ನು ಒಮ್ಮೊಮ್ಮೆ ರಹಸ್ಯದಿಂದಿರಿಸಲಾಗುತ್ತದೆ! ಇದು ವಿಜ್ಞಾನದ ಪ್ರತಿಷ್ಠೆಯಲ್ಲ, ಪ್ರಭುತ್ವದ ಕುತಂತ್ರ) ಶ್ರದ್ಧಾ ಪ್ರವರ್ತನಕ್ಕೆ ವಾಸ್ತವವಾಗಿ ಕೆಲವು ಹೊಸ ತಿರುವುಗಳನ್ನು ಎದುರಿಸ ಬೇಕಾದಾಗ, ರಹಸ್ಯೀಕರಣವನ್ನು ಸ್ಥಿರವಾಗಿಡಲು ಭಾಷೆಯ ನೆರವು ಪಡೆಯ ಬೇಕಾಗುತ್ತದೆ. (ಶ್ರದ್ಧಾ ವಿಷಯ - ಓರಿಯಂಟಲ್ ಆಗಿರಲಿ, ಅಥವಾ ಪಾಣಿನಿ, ವೇದ ಅಥವಾ ಕುರಾನ್, ಮಾರ್ಕ್ಸ್ ಅಥವಾ ಗಾಂಧಿ, ಇವುಗಳಿಂದ ಯಾವ ವ್ಯತ್ಯಾಸವೂ ಆಗುವುದಿಲ್ಲ. ಅಧೀನತೆಯ ಸಾಮನೀತಿಯನ್ನು ಹಾಗೆ ಇಟ್ಟುಕೊಂಡಿರುವುದೇ ಮುಖ್ಯವಾಗಿದೆ.) ಅರ್ಥದ ಸಂದಿಗ್ಧತೆ

ಮತ್ತು ಸಂಶ್ಲಿಷ್ಟತೆ, ಶಬ್ದಾಂಕನದ ಪರೋಕ್ಷತೆ ಮತ್ತು ಜಟಿಲತೆ ರಹಸ್ಯ ಸ್ವೀಕಾರವನ್ನು ಉಳಿಸಿಕೊಳ್ಳುವಲ್ಲಿ ನೆರವಾಗುತ್ತದೆ (ರಹಸ್ಯ ವಿಷಯ ಆಚಾರ ಧರ್ಮದ ಸಮರ್ಥನೆಗಾಗಿರಲಿ, ಅಥವಾ ಪ್ರಭುತ್ವಯುತ ಲೋಕನಾಯಕರ ಭೂಮಿಕೆಯಲ್ಲಿರಲಿ ಅಥವಾ ಸುಪ್ರತಿಷ್ಠ ವಿಚಾರವಂತರ ಅಭಿಪ್ರಾಯವಾಗಿರಲಿ ಇದರಿಂದ ಯಾವ ವ್ಯತ್ಯಾಸವೂ ಆಗುವುದಿಲ್ಲ).

ಮತ್ತೊಂದು ವಿಷಯ ವಾಙ್ಮಯದ ಭಾಷೆಯದು. ವಾಙ್ಮಯ ಎಂಬುದು ಭಾಷಾ ಶಬ್ದ ಪ್ರಯೋಗವೆಂದರೆ, ಯಾವುದು ಸಮಾಜದಲ್ಲಿ ಪಾರಾಯಣ ಯೋಗ್ಯ ಎಂದು ತಿಳಿಯಲಾಗುತ್ತದೆ. ಪಾರಾಯಣ ಅಂದರೆ ಒಂದೇ ಶಬ್ದ ಪ್ರಯೋಗವನ್ನು ಅನೇಕ ಭಾಷಾ ಪ್ರಯೋಗಗಳಲ್ಲಿ ಮಾಡುವುದು. ವಾಙ್ಮಯದಲ್ಲಿ ವೈಚಾರಿಕ ವಾಙ್ಮಯ, ಧರ್ಮಗ್ರಂಥ, ಲಲಿತ ವಾಙ್ಮಯಗಳು ಸೇರಿರುತ್ತವೆ. ಲಲಿತ ವಾಙ್ಮಯವನ್ನು ಸಾಹಿತ್ಯವೆಂದೇ ಪರಿಗಣಿಸಲಾಗುತ್ತದೆ. ವಾಙ್ಮಯದಲ್ಲಿ ಪತ್ರಿಕೋದ್ಯಮವನ್ನು ಸೇರಿಸುವುದು ಅದನ್ನು ಪಾರಾಯಣ ಯೋಗ್ಯವೆಂದು ತಿಳಿಯುವ ತನಕ ಮಾತ್ರ ಸೂಕ್ತ. ಇಲ್ಲಿ ನಾವು ಎಲ್ಲ ವಾಙ್ಮಯದ ಪ್ರಕಾರಗಳ ಬಗ್ಗೆ ವಿಚಾರ ಮಾಡುತ್ತಿದ್ದೇವೆ.

ವಾಙ್ಮಯದ ಭಾಷಾ ಪ್ರಯೋಗದ ಸಹಾಯದಿಂದ ಶ್ರದ್ಧಾ ಪ್ರವರ್ತನ, ವಿವೇಕ ಪ್ರವರ್ತನ, ಭಾವವಿಕಾರ ಮತ್ತು ಭಾವ ಜಾಗೃತಿ ಆಗುತ್ತಿರುತ್ತದೆ. ಉದಾಹರಣೆಗೆ ಚೋಮನ ದುಡಿಯ ನಾದವನ್ನು ಯಾರಾದರೂ ಕೇಳುವರೋ ಇಲ್ಲವೋ, ಆದರೆ ಶಿವರಾಮ ಕಾರಂತರ ಮತ್ತು ಅವರ ಓದುಗರ ವಾಙ್ಮಯದ ಬುದ್ಧಿ ಕೇಳುತ್ತದೆ. ಸ್ವಾಭಾವಿಕವಾಗಿ, ಪ್ರಭುತ್ವಾಕಾಂಕ್ಷಿ ಯಾದವರು, ಅವರು ಪ್ರಭುತ್ವ ಉಳ್ಳವರಾಗಿರಲಿ ಅಥವಾ ಪ್ರಭುತ್ವವಿಯುತರಾಗಿರಲಿ, ವಾಙ್ಮಯದಿಂದ ತಮ್ಮ ಸಾಮನೀತಿಗೆ ಸಾಕಷ್ಟು ಲಾಭ ಪಡೆಯುತ್ತಾರೆ. ವಾಙ್ಮಯದ ಪ್ರಭುತ್ವಕಾರಣದೊಂದಿಗಿನ ಸಂಬಂಧ ಈ ಸಂದರ್ಭದಲ್ಲಿ ಬಹಳ ಪರೋಕ್ಷವಾಗಿರುತ್ತದೆ. ವಾಙ್ಮಯದ ಭಾಷೆ ಪ್ರಭುತ್ವದೊಂದಿಗೆ ಪ್ರತ್ಯಕ್ಷವಾಗಿ ಹೇಗೆ ಸಂಬಂಧಿಸಿರಬೇಕು ಇದನ್ನು ಬೇರೆ ದಿಕ್ಕುಗಳಲ್ಲಿ ಹುಡುಕಬೇಕಾಗುತ್ತದೆ.

ಭಾಷಾ ಪ್ರಯೋಗದಲ್ಲಿ ಭಾಷಾ ಶಕ್ತಿಯ ಆವಿಷ್ಕಾರವಾದಾಗ ಅದರಲ್ಲಿ ಎರಡು ಪ್ರವೃತ್ತಿಗಳು ಕಾಣಿಸುತ್ತವೆ. ಮೊದಲನೇ ಪ್ರವೃತ್ತಿಯೆಂದರೆ ಸಮಾಜ ಜೀವನದ ಅನ ಪ್ರಕಾರಗಳು ಮತ್ತು ಅನೇಕ ವಿಭಜನೆಗಳನ್ನು ಗಮನದಲ್ಲಿಟ್ಟುಕೊಂಡು ಭಾಷಾ ವ್ಯವಸ್ಥೆಯಲ್ಲಿ ವೈವಿಧ್ಯ, ವಿಕೇಂದ್ರೀಕರಣದಿಂದ ಉಂಟಾಗುವ, ಭಾಷಾ ಪ್ರಯೋಗದಲ್ಲಿ ಜೀವನಗತವಾದ, ಗ್ರಾಮಾಂಚಲದ. ಪೀಳಿಗೆಗಳ ಭೇದವನ್ನು ಉಂಟುಮಾಡುವ ಮತ್ತು ಭಾಷೆಗಳ ವೈವಿಧ್ಯವನ್ನು ಉಳಿಸಿಕೊಳ್ಳುವ ಪ್ರವೃತ್ತಿ. ಎರಡನೇ ಪ್ರವೃತ್ತಿಯೆಂದರೆ ಪರಿಷ್ಕರಣದ, ಪ್ರಮಾಣೀಕರಣದ, ್ರೀಕರಣದ, ಏಕರೂಪತೆಯ ಬಹುವಿಧ ಜೀವನವನ್ನು, ಗ್ರಾಮಾಂಚಲಗಳನ್ನೂ, ಪೀಳಿಗೆಗಳನ್ನೂ ಹೊಂದಿರುವ ಪ್ರೇರಣೆ, ಸಶಕ್ತ ಕೇಂದ್ರವಾಗುವ ಪ್ರೇರಣೆ ಸಕ್ರಿಯವಾಗುವ

ಪ್ರವೃತ್ತಿ. ಸಂಸ್ಕೃತಿಯ ವಿವಿಧ ಆಯಾಮಗಳು ಭಾಷೆಯ ಈ ಎರಡನೆಯ ಪ್ರವೃತ್ತಿಯ ಪ್ರಯೋಜನ ಪಡೆದು ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುತ್ತವೆ. ಗೌತಮ ಬುದ್ಧನು ತನ್ನ ಅನುಯಾಯಿಗಳಿಗೆ ತಮ್ಮ ತಮ್ಮ ಆಡುಭಾಷೆಗಳಲ್ಲಿ ಧರ್ಮ ಪ್ರವರ್ತನ ಮಾಡಲು ಆದೇಶಿಸಿದ್ದರೂ ಮತ್ತು ಬುದ್ಧ ವಚನವನ್ನು ಸಂಸ್ಕೃತಕ್ಕೆ ತರ್ಜುಮೆ ಮಾಡುವುದನ್ನು ನಿಷೇಧಿಸಿದ್ದರೂ ಬುದ್ಧನ ನಂತರದ ಬೌದ್ಧರು ಸಂಸ್ಕೃತವನ್ನು ಬಹಳವಾಗಿಯೇ ಬಳಸಿದರು. ಇಸ್ಲಾಮಿನ ಪ್ರಸಾರವಾದಂತೆ ಅರಬ್ಬೀ ಭಾಷೆಯೂ ಪ್ರಸಾರಣಗೊಂಡಿತು. ಆಗ ಅನೇಕ ಬರ್ಬರ, ಮಿಶ್ರ (ಈಜಿಪ್ಟಿನ) ಮೊದಲಾದ ಸ್ಥಾನೀಯ ಭಾಷೆಗಳು ಲೋಪಗೊಂಡಿದ್ದವು, ಇಲ್ಲ ಕೇವಲ ಆಡುಭಾಷೆಗಳಾಗಿ ಉಳಿದಿದ್ದವು. ಲಲಿತ ಸಾಹಿತ್ಯದಲ್ಲಿ ನಾವು ಈ ಎರಡೂ ಪ್ರವೃತ್ತಿಗಳ ಆವಿಷ್ಕಾರವನ್ನು ಕಾಣುತ್ತೇವೆ. ಒಂದು ಕಡೆ ಮಧ್ಯಯುಗದ ಭಕ್ತಿ ಕಾವ್ಯದಲ್ಲಿ ಮತ್ತು ವೀರಗಾಥೆಯ ಕಾವ್ಯಗಳಲ್ಲಿ ಕಿಚಡಿ ಆಡು ಭಾಷೆಗಳ ಪ್ರಯೋಗ ಅಥವಾ ಯುರೋಪಿನ ಬೂರ್ಜ್ವಾ ಕಾದಂಬರಿಗಳಲ್ಲಿ ಮಿಖಾಯಿಲ ಬಾಖ್ತಿನನು ಉದ್ದೇಶಿಸಿರುವ ಭಾಷಾ ಬಹುವಿಧತೆ (ರಾಜ್ನೊರೆಚಿಯೆ) ಮತ್ತೊಂದು ಕಡೆ ನೋಡಿದರೆ ಮಧ್ಯಯುಗದ ಕೃಷ್ಣ ಭಕ್ತಿ ಕಾವ್ಯದ ಪರಿಷ್ಕೃತ ವ್ರಜಭಾಷೆಯ ಆವಿಷ್ಕಾರ ಅಥವಾ ವಿದಗ್ಧ ಉರ್ದು ಕಾವ್ಯಗಳಲ್ಲಿ ಕಂಡಿರುವ ಪರಿಷ್ಕರಣ ಮತ್ತು ಸ್ಥಿರೀಕರಣ ಮತ್ತು ಅದರ ದಕ್ಖಿನಿ ಭಾಷೆಗಳಲ್ಲಿ ಪ್ರಸಾರಣ ಅಥವಾ ಪೂರ್ವ ಏಷಿಯ ಮತ್ತು ದಕ್ಷಿಣ ಪೂರ್ವ ಏಷಿಯಾದ ದೊಡ್ಡ ಭಾಗದಲ್ಲಿ ಅಭಿಜಾತ ಚೀನೀ ಭಾಷೆ ಮತ್ತು ಸಾಹಿತ್ಯದ ಪ್ರಭಾವ. ಈ ರೀತಿಯ ಸಾಹಿತ್ಯಿಕ ಘಟನೆಗಳು ಪ್ರಭುತ್ವ ಕಾರಣದೊಂದಿಗೆ ಎಷ್ಟರ ಮಟ್ಟಿಗೆ ಅನುಬಂಧದಿಂದಿರುತ್ತವೆ, ಎಂಬುದನ್ನು ನೋಡಬೇಕು. ಈ ದಿಸೆಯಲ್ಲಿ ಹುಡುಕುತ್ತ ನಾವು ಶೂದ್ರಕನ ಮೃಚ್ಛಕಟಿಕದ ಶಕ್ತಿ ಸ್ಥಾನ ಮತ್ತು ಪ್ರೇರಣಾ ಸ್ರೋತ್ರದ ಪತ್ತೆ ಹಚ್ಚಬಹುದು.

ಭಾಷಾ ಪ್ರಯೋಗದಲ್ಲಿ ಭಾಷೆ ಶಕ್ತಿಯ ಆವಿಷ್ಕಾರ ಕಂಡುಬರುತ್ತದೆ. ಅದು ಪರೋಕ್ಷವಾಗಿ ಎರಡರ ನಡುವೆ ಭಾಷಾ ವ್ಯವಸ್ಥೆ ಅಥವಾ ಶಬ್ದ ಶಕ್ತಿಯಾಗಿರುತ್ತದೆ. ಶಬ್ದ ಶಕ್ತಿಯ ಆವಿಷ್ಕಾರ ಭಾಷಾ ಪ್ರಯೋಗದಲ್ಲಿ ಆದಾಗ ಅದರಲ್ಲಿ ಎರಡು ಪ್ರವೃತ್ತಿಗಳು ಕಂಡು ಬರುತ್ತವೆ - ಯಾವ ಪ್ರವೃತ್ತಿಗಳು ಆ ಸಂಕೋಲೆಯ ವಿಷಯದಲ್ಲಿ ಕಂಡುಬರುತ್ತವೆ ಎಂಬುದನ್ನು ನಾವು ಮೊದಲೇ ನೋಡಿದ್ದೇವೆ. ಭಾಷಿಕ ಚಲನೆ ಹೀಗಿರಬೇಕು ಎಂಬುದು ನೆನಪಿರಬೇಕು : ಅರ್ಥ - ಆಕಲನ, ಸ್ವಸಂವಾದ - ಅನ್ಯ ಸಂವಾದ - ಅನ್ಯೋನ್ಯ ಸಂವಾದ ಇಂಟೀರಿಯರ್ ಮೊನೋಲಾಗ್ : ಮೊನೋಲಾಗ್: ಡಾಯಲಾಗ್, ಅರ್ಥ-ಸಂಜ್ಞಾಪನ : ಸ್ವ ಪ್ರವರ್ತನ, ಅನ್ಯ ಪ್ರವರ್ತನ - ಅನ್ಯೋನ್ಯ ಪ್ರವರ್ತನ.

ಒಂದು ಪ್ರವೃತ್ತಿಯಲ್ಲಿ ಸಂಬಂಧಪಟ್ಟ ಮನುಷ್ಯನನ್ನು ಅನ್ಯ ಪ್ರವರ್ತನದ ಮೂಲಕ ಅಂತತಃ ಸ್ವಪ್ರವರ್ತನ ಅಥವಾ ಸ್ವಸಂವಾದದ ಕಡೆಗೆ ಒಯ್ಯುತ್ತದೆ, ರಹಸ್ಯ ಸ್ವೀಕಾರದ

ಕಡೆಗೆ ಒಯ್ಯುತ್ತದೆ. ಕಾಳಿದಾಸ ಅಥವಾ ತುಲಸಿದಾಸರಂತಹ ಅನುವರ್ತನಶೀಲ ಅಥವಾ ಕನ್‌ಫರ್ಮಿಸ್ಟ್, ಪರಂಪರಾ ಪುಷ್ಟ ಕವಿಗಳ ಪ್ರಭಾವ ಈ ಪ್ರವೃತ್ತಿಯ ಪರಿಚಯ ಮಾಡಿಕೊಡುತ್ತದೆ. ಮತ್ತೊಂದು ಪ್ರವೃತ್ತಿ ಇದಕ್ಕೆ ವಿರುದ್ಧವಾದದ್ದು. ಅದರಲ್ಲಿ ಸಂಬಂಧಪಟ್ಟ ಮನುಷ್ಯನನ್ನು ಅನ್ಯ ಸಂವಾದದ ಮೂಲಕ ಅನ್ಯೋನ್ಯ ಸಂವಾದ ಅಥವಾ ಅನ್ಯೋನ್ಯ ಪ್ರವರ್ತನದ ಕಡೆಗೆ ಒಯ್ಯುತ್ತದೆ. ರಹಸ್ಯೋದ್ಘಾಟನೆಯ ಕಡೆಗೆ ಒಯ್ಯುತ್ತದೆ. ಭವಭೂತಿ ಅಥವಾ ಕಬೀರನಂತಹ ಪರಿವರ್ತನಶೀಲ ಅಥವಾ ಸಬ್‌ವರ್ಸಿವ್, ಪರಂಪರಾ ಭಂಜಕ ಕವಿಗಳ ಪ್ರಭಾವ ಈ ಎರಡನೇ ಪ್ರವೃತ್ತಿಯ ಪರಿಚಯ ಮಾಡಿಕೊಡುತ್ತದೆ. ಈ ಎರಡು ಪ್ರವೃತ್ತಿಗಳ ಬಗ್ಗೆ ಇನ್ನೂ ಹೆಚ್ಚು ತಪಾಸಣೆಯ ಆವಶ್ಯಕತೆಯಿದೆ. ಇದರಿಂದ ಜ್ಞಾನೇಶ್ವರ ಅಥವಾ ಶೇಕ್ಸ್‌ಪಿಯರ್, ಇಬ್ಸನ್ ಅಥವಾ ಬ್ರೆಶ್ಟ್‌ರ ಪ್ರಭಾವವನ್ನು ಹೇಗೆ ತಿಳಿಯಬಹುದು ಎಂಬುದನ್ನು ಹುಡುಕಬಹುದು. ಆಳವಾಗಿ ಯೋಚಿಸಿದರೆ ಏನೆಲ್ಲ ಬಗೆಹರಿಸಬಹುದು. ಇದನ್ನು ದಿಗ್ದರ್ಶಿಸುವ ಪ್ರಯತ್ನ ಮಾತ್ರ ನಾವು ಮಾಡಿದ್ದೇವೆ. ಇನ್ನೂ ಹೆಚ್ಚು ತಪಾಸಣೆಯ ಆವಶ್ಯಕತೆಯಿದೆ.

ನಮ್ಮ ಮೂರನೇ ಪ್ರಶ್ನೆಗೆ ಉತ್ತರ ಹೀಗಿರಬಹುದು :

(1) ವಿಚಾರ-ಭಾಷೆಗಳ ಸಂಬಂಧ ದಿನನಿತ್ಯದ ಆಡುಭಾಷೆಯ ಜೊತೆಗೆ ಹೊಂದಿಕೊಂಡಿರುವುದು ವಿಚಾರಗಳ ಸಾಮ್ರಾಜ್ಯದ ಉಳಿವಿಗೆ ಒಳ್ಳೆಯದು.

(2) ಭಾವ-ಭಾಷೆಗಳ ಸಂಬಂಧ 'ದೇಸಿ' ಆಡುಭಾಷೆಯೊಂದಿಗೆ ಹೊಂದಿಕೊಂಡಿರುವುದು ಭಾವಗಳ ಮೂಲ ರೂಪ ಉಳಿಸಿಕೊಳ್ಳಲು ಒಳ್ಳೆಯದು.

(3) ವಿಚಾರ-ಭಾಷೆಗಳು, ಭಾವ-ಭಾಷೆಗಳು ಹೊಸ ಹೊಸ ಸಂಭವಗಳ ಆವಿಷ್ಕಾರದಲ್ಲಿ ಸದಾ ತೊಡಗಿರಲಿ. ಆ ಸಂಭವಗಳು ಸ್ವಕೀಯವಾಗಿರಲಿ ಇಲ್ಲ ಪರಕೀಯನಾಗಿರಲಿ, ಅವು ಪರಂಪರೆಯ ಕೊಡುಗೆಯಾಗಿರಲಿ ಇಲ್ಲ ನವ ನಿರ್ಮಾಣದ ಕೊಡುಗೆಯಾಗಿರಲಿ.

(4) ಶಬ್ದ ಶಕ್ತಿಯ ಪ್ರತ್ಯಕ್ಷ ಸಂಬಂಧ ರಹಸ್ಯ ಸ್ವೀಕಾರ ಮತ್ತು ರಹಸ್ಯೋದ್ಘಾಟನೆಯೊಂದಿಗೆ ಮತ್ತು ಅಪ್ರತ್ಯಕ್ಷವಾಗಿ ಶ್ರದ್ಧಾ ಪ್ರವರ್ತನ ಮತ್ತು ವಿಚಾರ ಪ್ರವರ್ತನದೊಂದಿಗೆ ಇದೆ.

(5) ಭಾಷಾ ಪ್ರಯೋಗದಲ್ಲಿ (ವಿಶೇಷತಃ ಸಾಹಿತ್ಯದ ಮತ್ತು ವಾಙ್ಮಯದ ಭಾಷಾ ಪ್ರಯೋಗದಲ್ಲಿ) ವಿಕೇಂದ್ರೀಭೂತ ಅಥವಾ ಕೇಂದ್ರೀಭೂತ ರೂಪದಲ್ಲಿ ಭಾಷಾ ಶಕ್ತಿಯ ಆವಿಷ್ಕಾರವಾಗಬಹುದು, ಅದರ ಪ್ರಭುತ್ವಕಾರಣದೊಂದಿಗೆ ಅನುಬಂಧ ಉಂಟಾಗಬಹುದು.

(6) ಭಾಷಾ ಪ್ರಯೋಗದಲ್ಲಿ (ವಿಶೇಷತಃ ಸಾಹಿತ್ಯದ ಮತ್ತು ವಾಙ್ಮಯದ ಭಾಷಾ ಪ್ರಯೋಗದಲ್ಲಿ) ಶಬ್ದ ಶಕ್ತಿಯ ಆವಿಷ್ಕಾರ ಸಂಬಂಧಿಸಿದ ವ್ಯಕ್ತಿ ಸ್ವಪ್ರವರ್ತನ, ಸ್ವಸಂವಾದದ ಕಡೆಗೆ ಒಯ್ಯುತ್ತದೆ ಅಥವಾ ಅನ್ಯೋನ್ಯ ಸಂವಾದ, ಅನ್ಯೋನ್ಯ ಪ್ರವರ್ತನದ ಕಡೆಗೆ ಒಯ್ಯುತ್ತದೆ. ಈ ಎಲ್ಲದರ ಪ್ರಭುತ್ವಕಾರಣದೊಂದಿಗೆ ಅನುಬಂಧ ಸಾಧ್ಯ.

ಮೂರು ಪ್ರಶ್ನೆಗಳಿಗೆ ನಾವು ಕೊಟ್ಟ ಉತ್ತರಗಳನ್ನು ತಾವು ಒಪ್ಪಬಹುದು, ಇಲ್ಲ ಬಿಡಬಹುದು. ಆದರೆ ಈ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಆವಶ್ಯಕವೆಂದು ತಾವು ಒಪ್ಪುತ್ತೀರಿ. ಅದರಿಂದ ನಾವು ಭಾಷೆಯನ್ನು ಮತ್ತು ಭಾಷೆಯ ಮನುಷ್ಯ ಜೀವನದೊಂದಿಗಿನ ಅನುಬಂಧವನ್ನು ಚೆನ್ನಾಗಿ ತಿಳಿಯಬಹುದು. ಭಾಷಾ ಪ್ರಯೋಗದಲ್ಲಿ ಸಾಹಿತ್ಯ ಜೊತೆಗಿದ್ದೇ ಇದೆ.

**ಟಿಪ್ಪಣಿ :**

ಈ ಪ್ರಬಂಧದ ಮೊದಲ ಡ್ರಾಫ್ಟನ್ನು ಮಹಾಪಂಡಿತ ರಾಹುಲ ಸಾಂಕೃತ್ಯಾಯನ ಜನ್ಮ ಶತಾಬ್ದಿಯ ಸಂದರ್ಭದಲ್ಲಿ ನಡೆದ ರಾಷ್ಟ್ರೀಯ ಪರಿಸಂವಾದದಲ್ಲಿ (ಹೊಸ ದೆಹಲಿ, 9-10 ಏಪ್ರಿಲ್ 1993) ಓದಲಾಯಿತು. ಇಂತಹ ವೈಚಾರಿಕ ಆವಿಷ್ಕಾರದಲ್ಲಿ ಅನೇಕಾನೇಕ ಪೂರ್ವ ವಿದ್ವಾಂಸರಿಂದ ಸಹಾಯ ಪಡೆಯಬೇಕಾಗುತ್ತದೆ. ಆದರೂ ಕೆಲವರ ಹೆಸರನ್ನು ಕಾಲಕ್ರಮದಲ್ಲಿ ತಿಳಿಸುವುದು ಒಳ್ಳೆಯದು :

ರಾಜನೀತಿ ಮೀಮಾಂಸಕ ಕೌಟಿಲ್ಯ, ವೈಯಾಕರಣ, ದಾರ್ಶನಿಕ ಭರ್ತೃಹರಿ, ವೈಯಾಕರಣ ನಾಗೇಶ ಭಟ್ಟ ಕಾಳೆ, ಇತಿಹಾಸಕಾರ ವಿಶ್ವನಾಥ ಕಾಶೀನಾಥ ರಾಜವಾಡೆ, ಸ್ವಿಸ್ ಭಾಷಾ ವಿಜ್ಞಾನಿ ಫೆರ್ಡಿನಾಂಡ್ ಸೊಸ್ಯೂರ್, ಅಮೆರಿಕೆಯ ನ್ಯಾಯಶಾಸ್ತ್ರ ಪಂಡಿತ ವೆಜ್ಲಿ ನ್ಯೂಕಮ್ ಹೊಫೆಲ್ಡ, ಆಂಗ್ಲ ಗಣಿತಜ್ಞ, ದಾರ್ಶನಿಕ ಬರ್ಟ್ರೆಂಡ್ ರಸೆಲ್, ರಷ್ಯದ ಸಾಹಿತ್ಯ ಮೀಮಾಂಸಕ ಮಿಖಾಯಿಲ್ ಬಾಖ್ತಿನ್ ಮತ್ತು ಸಾಹಿತ್ಯ ಮೀಮಾಂಸಕ, ದಾರ್ಶನಿಕ ದಿನಕರ ಕೇಶವ ಬೆಡೇಕರ್.

ಇಷ್ಟಂತೂ ಹೇಳಲೇಬೇಕು : ನನ್ನ ವಿಚಾರಗಳಿಗೆ ನಾನೇ ಹೊಣೆ - ತಪ್ಪು ತಿಳುವಳಿಕೆಗಾಗಲಿ ಉದ್ದೇಶಪೂರ್ವಕ ಹಿಂದಿನ ವಿದ್ವಾಂಸರ ವಿಚಾರಗಳನ್ನು ತಿರಿಚುವುದಾಗಲಿ ಎಲ್ಲಕ್ಕೂ ನಾನೇ ಹೊಣೆ.

ಲಿಖಿತ ರೂಪದ ಪ್ರತಿಕ್ರಿಯೆಗೂ ಸ್ವಾಗತ.

ನನ್ನ ವಿಳಾಸ : 7, ಧನಂಜಯ, 759/83, ಭಂಡಾರ್‌ಕರ್ ರಸ್ತೆ, ಪುಣೆ - 411 004.

# ಪರಂಪರೆ : ಒಂದು ಸ್ವಗತ

ಮೂಲ : ಸಚ್ಚಿದಾನಂದ ಹೀರಾನಂದ ವಾತ್ಸ್ಯಾಯನ 'ಅಜ್ಞೇಯ'
ಅನು : ಭಾಲಚಂದ್ರ ಜಯಶೆಟ್ಟಿ

ಪರಂಪರೆ ಎಂದರೆ ಅದು ನನ್ನ ದೃಷ್ಟಿಯಲ್ಲಿ ಏನೂ ಅರ್ಥವಿಲ್ಲದ್ದು ಎಂದಾಗಿರಬಹುದು, ಅಥವಾ ಪರಂಪರೆ ಎಂದರೆ ಅರ್ಥಹೀನ ಎಂದು ನನ್ನ ಬಲವಾದ ನಂಬಿಕೆಯಾಗಿರಲೂ ಬಹುದು. ಆದರೆ ಅಷ್ಟಕ್ಕೇ ಮುಗಿಯಿತೆ? ಈ `ಅರ್ಥವಿಲ್ಲ' ಎನ್ನುವುದಕ್ಕೂ ಒಂದು ಅರ್ಥವಿದೆ: ಅದನ್ನು ಕುರಿತು ಆಲೋಚಿಸಬೇಕಾಗಿದೆ. ನನ್ನ ತಂದೆತಾಯಿಗಳಿಗೂ, ಗುರು ಹಿರಿಯರಿಗೂ ಪರಂಪರೆಯು ಅರ್ಥವಿಲ್ಲದ್ದು ಆಗಿದ್ದಿದ್ದರೆ ಮಾತ್ರ ವಾಸ್ತವವಾಗಿ ಅದು `ನನಗೆ ಏನೂ ಅರ್ಥವಿಲ್ಲದ್ದು' ಆಗಿರಲು ಸಾಧ್ಯ. ಇಲ್ಲವಾದರೆ ಶಿಕ್ಷಣ ಮುಂತಾದವುಗಳಿಂದ ದೊರಕಿಕೊಂಡ ಸಂಸ್ಕಾರಗಳಿಗೆ ಏನಾದರೂ ಅರ್ಥ ಇರಲೇಬೇಕು - ಅದು ಸಕಾರಾತ್ಮಕ ವಾಗಿಯಾದರೂ ಇರಬಹುದು ಅಥವಾ ನಕಾರಾತ್ಮಕವಾಗಿಯಾದರೂ ಇರಬಹುದು. ಈ ರೀತಿಯಾಗಿ ಹೇಳುವುದರ ತಾತ್ಪರ್ಯ ಒಂದು ಅಂತಹೀನವಾದ ಪ್ರಾಮುಖ್ಯತೆಯನ್ನು ಕುರಿತು ತರ್ಕ ಮಂಡಿಸುವುದಕ್ಕಾಗಿಯಲ್ಲ. ಅದನ್ನು ಖಂಡಿಸುವುದಕ್ಕಾಗಿ ಯಾದರೂ ಆಲೋಚನೆ ಮಾಡಲೇ ಬೇಕಾಗಿದೆ. ಮಹತ್ವದ ಸಂಗತಿ ಎಂದರೆ ಪರಂಪರೆಯನ್ನು ಸಮರ್ಥಿಸುವುದಾಗಲೀ ಅಥವಾ ಅದನ್ನು ಖಂಡಿಸುವ ಒತ್ತಾಸೆ ಮಾಡುವುದಾಗಲೀ ಪರಂಪರೆಗೆ ಒಂದು ಅರ್ಥ ಕೊಡುವ ಕಾರ್ಯವೇ ಆಗಿದೆ: ಆ ಅರ್ಥವು ಸಕಾರಾತ್ಮಕವಾದರೂ ಇರಬಹುದು, ನಕಾರಾತ್ಮಕವಾದರೂ ಇರಬಹುದು. ಪರಂಪರೆಯು ಯಾವುದೇ ಬಗೆಯ ಪ್ರಭಾವವಾಗಲೀ ಅಥವಾ ಅದರ ಕುರಿತು ಪ್ರತ್ಯಕ್ಷ ಇಲ್ಲವೆ ಪರೋಕ್ಷವಾದ ಜ್ಞಾನವಾಗಲೀ ಇಲ್ಲದೇ ಇರುವಾಗ ಅದು ಅರ್ಥಹೀನವಾಗಬಹುದು. ಆಗ ಓದು ಬರಹ ಮತ್ತು ಅನುವಂಶೀಯ ಸಂಸ್ಕಾರಗಳ ಬಗ್ಗೆ ಪ್ರಶ್ನಾರ್ಥಕ ಚಿಹ್ನೆ ಎದ್ದು ನಿಲ್ಲುತ್ತದೆ.

ಒಂದು ವೇಳೆ ಪರಂಪರೆಯ ಜ್ಞಾನವು ನನಗೆ ಒಂದಿಷ್ಟೂ ಇಲ್ಲದಿದ್ದರೆ, ಆಗ ನಾನು `ನನಗೇನೂ ಅರ್ಥವಿಲ್ಲ' ಎಂದೇನೋ ಹೇಳಬಹುದು; ಆದರೆ ಈ ಮಾತು ನನ್ನ ಬಗ್ಗೆ ಮಾತ್ರ ಸತ್ಯ, ಪರಂಪರೆಯ ಮೌಲ್ಯದ ಬಗ್ಗೆಯಲ್ಲ. ಯಾಕೆಂದರೆ, ಅಜ್ಞಾನದ ಸ್ಥಿತಿಯಲ್ಲಿ ನಮ್ಮ ಮೇಲೆ ಯಾವುದೇ ಸಂಗತಿಯ ಪ್ರಭಾವ ಇಲ್ಲದೇ ಇರಬಹುದಾದ ಸಾಧ್ಯತೆ ಇದೆ. ಆದರೂ ಆ ಸಂಗತಿ ತನ್ನಲ್ಲಿ ತಾನು ಮೌಲಿಕವಾಗಿರುತ್ತದೆ.

ಎರಡನೆಯದಾಗಿ : ಪರಂಪರೆಯು ಅರ್ಥಹೀನವಾದುದು ಎಂಬ ವಿಚಾರದ ಮೇಲೆ ತಾರ್ಕಿಕವಾದ ವಿತಂಡವಾದಕ್ಕೆ ಯಾಕೆ ಆಸ್ಪದ ಕೊಡಬೇಕು ಎಂಬ ಮಾತೂ ಕೇಳಿಬರುತ್ತದೆ. ಅದರ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾದ ಪ್ರಭಾವ ಇರಲೂಬಹುದು. ನಾನು ಅದನ್ನು ತರ್ಕಸಂಗತವಾಗಿ ಅಥವಾ ಬುದ್ಧಿಪೂರ್ವಕವಾಗಿ ಅಗ್ರಾಹ್ಯವೆಂದು ತಿಳಿದು ಅದನ್ನು ತಿರಸ್ಕರಿಸುತ್ತಿರುವಾಗ - ಅದನ್ನು ವಿರೋಧಿಸುತ್ತಿರುವಾಗ, ಆ ತಿರಸ್ಕಾರವನ್ನು ಅಥವಾ ವಿರೋಧವನ್ನು ಅರ್ಥಹೀನ ಎಂದು ಕರೆಯಬೇಕೇ ಬೇಡವೆ ಎಂಬುದು ವಿತಂಡವಾದವೇ ಆಗಿದೆ; ಯಾಕೆಂದರೆ ಇದರ ಪ್ರಯೋಜನ ಇಷ್ಟೆ; ನಾನು ನನ್ನ ಕಾರ್ಯ ವ್ಯಾಪಾರಗಳಲ್ಲಿ ಮತ್ತು ಚಿಂತನೆಯಲ್ಲಿ ಪರಂಪರೆಗೆ ಯಾವುದೇ ಮಹತ್ವದ ಸ್ಥಾನ ಕೊಡಬಯಸುವುದಿಲ್ಲ. ಆದರೆ ಅದು ಸರಿಯಾದ ವಿಚಾರ ಮತ್ತು ಸರಿಯಾದ ಕಾರ್ಯ ವ್ಯಾಪಾರಕ್ಕೆ ಬಾಧಕವಾಗಿರುತ್ತದೆ ಎಂದು ನಂಬುತ್ತೇನೆ.

ಪರಂಪರೆ ಕುರಿತ ಈ ಬಗೆಯ ನಕಾರಾತ್ಮಕ ಭಾವದಲ್ಲಿಯೂ ಕೂಡ ಪಿತೃಗಳ ಮತ್ತು ಶಿಕ್ಷಕರ ಕೊಡುಗೆ ಇದ್ದೇ ಇರುತ್ತದೆ ಎಂಬ ಸಂಗತಿ ಯಾವುದೇ ಪರಿಸ್ಥಿತಿಯಲ್ಲೂ ಉಳಿದು ಬಿಡುತ್ತದೆ. ಆಗ ಅವರ ಸಂಸ್ಕಾರಗಳು ಏನಿದ್ದುವು, ಅವರು ತಮ್ಮ ಮಕ್ಕಳಿಗೆ ಎಂಥ ಸಂಸ್ಕಾರ ಕೊಡಬಯಸಿದ್ದರು ಎಂಬ ಪ್ರಶ್ನೆ ಅಸಂಗತವಾಗುವುದಿಲ್ಲ.... ಪರಂಪರೆ ಕುರಿತ ತಮ್ಮ ಧೋರಣೆಯ ಈ ಮನೋವೈಜ್ಞಾನಿಕ ಅಂಶ ತನ್ನದೇ ಆದ ಮಹತ್ವ ಪಡೆದಿರುತ್ತದೆ. ಯಾಕೆಂದರೆ, ಪರಂಪರೆಯ ತಿರಸ್ಕಾರ (ಅಥವಾ ಪರಂಪರೆಯ ಪೂಜೆ) ಮೂಲತಃ ಪಿತೃಗಳ (ಅಂದರೆ ತಂದೆ ತಾಯಿಗಳ) ತಿರಸ್ಕಾರವಾಗಿರುವುದಾದರೆ, ಪಿತೃ ಪ್ರತಿಮೆ ಅಥವಾ ಮಾತೃ ಪ್ರತಿಮೆಯ ಭಂಜನೆಯಾಗಿರುವುದಾದರೆ ತಲೆಮಾರಿನ ಸಂಬಂಧಗಳ ಈ ಒಂದು ಪ್ರಕೃತ ಪಕ್ಷಕ್ಕೆ ಯೋಗ್ಯವಾದ ಮಹತ್ವವನ್ನು ಕೊಡದೇ ಇದ್ದರೂ ಪರಂಪರೆಗೂ ಒಂದು ಮೌಲ್ಯವಿದೆ, ಒಂದು ಮಹತ್ವವಿದೆ, ಒಂದು ಪ್ರಾಸಂಗಿಕತನ ಇದೆ ಎಂಬುದನ್ನು ನಾವು ಕಲ್ಪಿಸಬೇಕಾಗುತ್ತದೆ. ಯಾಕೆಂದರೆ ಪರಂಪರೆ ಎಂಬುದು ಬರೀ ಚೈತನ್ಯಯುತವೂ, ತರ್ಕಸಂಗತವಾದ ಪ್ರಭಾವವೂ ಅಥವಾ ವಿಚಾರಪುಂಜವೂ ಅಲ್ಲ. ಮೇಲಾಗಿ ಬರೀ ಅಚೇತನವಾದುದೂ ತರ್ಕಾತೀತ ಪ್ರಭಾವಗಳ ಇಲ್ಲವೆ ನಂಬಿಕೆಗಳ ಪುಂಜವೂ ಅಲ್ಲ. ಅದು ಇವೆಲ್ಲವುಗಳ ಪರಸ್ಪರ ಪ್ರಭಾವ ಹಾಗೂ ಅಂತರ್ಭೇದವೂ ಆಗಿದೆ.

ಇದನ್ನು ಅರ್ಥ ಮಾಡಿಕೊಳ್ಳುವುದಕ್ಕಾಗಿ ಇಲ್ಲಿ ಇನ್ನೊಂದು ಪ್ರಶ್ನೆಯನ್ನು ಕೇಳಬಹುದಾಗಿದೆ. ಪರಂಪರೆ ನನಗೆ ಅರ್ಥಹೀನವಾಗಿದೆ, ನಾನು ಅದನ್ನು ಮುರಿದು ಕೂಡ ಹಾಕಿದ್ದೇನೆ, ಅದನ್ನು ತ್ಯಜಿಸಿ ಬಿಟ್ಟಿದ್ದೇನೆ ಎಂದು ಭಾವಿಸೋಣ; ತಂದೆ ತಾಯಿಗಳು ಕೊಡಿಸಿದ ಶಿಕ್ಷಣವು ಇದಕ್ಕೆ ಸಹಕಾರಿಯಾಗಿತ್ತೆಂದೂ ತಿಳಿಯೋಣ - ಅಥವಾ ಕೊನೆಯ ಪಕ್ಷ ನನ್ನ ಮಟ್ಟಿಗಾದರೂ ಇದು ಸಾಧ್ಯವಾಗಿದೆ ಎಂದು ನಂಬೋಣ; ಈ ಹಿಂದಿನ

ಮೂರು ನಾಲ್ಕು ತಲೆಮಾರುಗಳೂ ಕೂಡ ಇದೇ ರೀತಿಯಾಗಿದ್ದುವು ಎಂದೂ ಕೂಡ ಭಾವಿಸೋಣ. ಅಂದರೆ ಯಾವುದು ಮೂಲತಃ ಅರ್ಥಹೀನವಾಗಿತ್ತೋ ಅದು ಕೊನೆಗೂ ಅರ್ಥಹೀನವಾಗಿಯೇ ಬಿಟ್ಟಿತು - ಅಂದರೆ ಸಕಾರಾತ್ಮಕವಾಗಲೀ, ನಕಾರಾತ್ಮಕವಾಗಲೀ ಯಾವುದೇ ಅರ್ಥತೆ ಉಳಿದಿರಲಿಲ್ಲ. ಅಂಥ ಪರಿಸ್ಥಿತಿಯಲ್ಲಿ ದೂರದ ಯಾವುದೋ ಒಂದು ವಿಚಾರ ಪತಾಕಿಕೆಯಾಗಿ ಹೇಗೆ ಎದುರಾಗುತ್ತದೆ? ಮತ್ತು ಅದರಲ್ಲಿ ನನಗೆ ಹೊಸ ಅರ್ಥ ಹೇಗೆ ಗೋಚರಿಸುತ್ತದೆ? - ಅದೂ ಕೂಡ ಕೇವಲ ತರ್ಕಾಧಾರಿತವಾದ ಅರ್ಥವಲ್ಲ; ಅದನ್ನು ಪುಷ್ಟೀಕರಿಸುವ, ಮಿಥಕಗಳ ಒಂದು ವಿಶೇಷ ಲಕ್ಷಣವಾದ ಶಕ್ತಿಸ್ರೋತವಾಗಿರುತ್ತದೆ. ಪರಂಪರೆಯು ಕಳಚಿ ಹೋದಾಗ, ಅರ್ಥಹೀನವಾದಾಗ ಒಂದು ಹಳೆಯ ಮಿಥಕೀಯ ಅಭಿಪ್ರಾಯದಲ್ಲಿ ಈ ಶಕ್ತಿ ಎಲ್ಲಿಂದ ಹರಿದು ಬಂತು? ಆ ಶಕ್ತಿ ಸಾಮರ್ಥ್ಯ ನನ್ನದಾಗಿತ್ತು. ಅದು ನಿರಂತರವಾಗಿ ಮತ್ತು ಮೊದಲಿನಿಂದಲೇ ಆ ಅಭಿಪ್ರಾಯದೊಂದಿಗೆ ಸಂಬದ್ಧವಾಗಿದ್ದು ಒಳಗೊಳಗೇ ಎಲ್ಲೋ ಹುದುಗಿಕೊಂಡಿರದಿದ್ದರೆ, ಆ ಅಭಿಪ್ರಾಯದೊಂದಿಗೆ ಹೇಗೆ ಸೇರಿಕೊಂಡಿತು? ಒಂದೇ ಒಂದು ಉತ್ತರವನ್ನು ಬಿಟ್ಟು, ಈ ಪ್ರಶ್ನೆಗೆ ಬೇರೆ ಯಾವ ಉತ್ತರವೂ ಇಲ್ಲ. ಅದೆಂದರೆ, ಪರಂಪರೆಗೆ ಒಂದು ಸಾಮೂಹಿಕವಾದ ಸ್ತರವಿದೆ, ಆ ಸ್ತರದಲ್ಲಿ ವಿಚಾರಗಳು ಸಾಯುವುದಿಲ್ಲ, ನಿಮ್ಮ ಹೊರತಾಗಿಯೂ ಬದುಕಿರುತ್ತವೆ, ಶಕ್ತಿ ಸಾಮರ್ಥ್ಯವನ್ನು ಸಂಚಯಿಸಿಕೊಂಡಿರುತ್ತವೆ. ಇದುವೇ ಪರಂಪರೆಯ ಆಳವಾದ ಸ್ತರವಾಗಿದೆ ಅಲ್ಲದೆ ಇದು ಎಂದೂ ಅರ್ಥಹೀನವಾಗುವುದಿಲ್ಲ - ಯಾಕೆಂದರೆ ಸಾಮೂಹಿಕವಾಗಿ ಸಂಚಯಿಸಿದ ಮನುಷ್ಯನ ಅನುಭವವು ಅರ್ಥಹೀನವಾಗಿರುವುದಿಲ್ಲ - ಯಾವುದೇ ಏಕಾಂತಿಕ ದೃಷ್ಟಿಕೋಣ ಅಥವಾ ಬುದ್ಧ್ಯಾಂಟಿಗಳ ಸಂಕಲ್ಪದಿಂದಲೂ ಕೂಡ.... ನಾನು ಒಬ್ಬ ಮನುಷ್ಯನಾಗಿರುವುದರಿಂದ ಎಷ್ಟೇ ಒಂಟಿಯಾಗಿದ್ದರೂ, ಒಂದು ಸಮೂಹದೊಂದಿಗೆ ನನ್ನ ಒಂದು ಬಗೆಯ ಸಪ್ರಾಣವಾದ ಹಾಗೂ ಘನಿಷ್ಠವಾದ ಸಂಬಂಧ ಇರುತ್ತದೆ - ನಾನು ಒಲ್ಲೆಂದರೂ ಈ ಸಂಬಂಧ ಇದ್ದೇ ಇರುತ್ತದೆ. ಪರಂಪರೆ ಎಂಬ ಶಬ್ದವೂ ಕೂಡ ಇದರ ಮೇಲೆ ಒತ್ತು ಕೊಡುತ್ತದೆ. ಅದು ಬರೀ ಒಂದು ಸತ್ತೆಯ ನಿತ್ಯತೆಯ ಮೇಲಲ್ಲ, ಅದರ ಶಾಶ್ವತೆಯ ಮೇಲಲ್ಲ; ಅದರ ನಿರಂತರತೆಯ ಮೇಲೆ, ಅದರ ಸಂತಾನತ್ವದ ಮೇಲೆ. ಒಂದನ್ನು ಇನ್ನೊಂದರೊಂದಿಗೆ ಜೋಡಿಸುವ, ಜೋಡಿಸಿಕೊಳ್ಳುವುದರ ಮೇಲೆ ಮತ್ತು ಆ ಜೋಡಣೆಯು ಜೀವಂತವಾಗುವುದರ ಮೇಲೆ ಒತ್ತು ಕೊಡುತ್ತದೆ. ಇದಕ್ಕಾಗಿ, ರೂಢಿಯಿಂದ ಪರಂಪರೆಯನ್ನು ಪ್ರತ್ಯೇಕಿಸುವುದಕ್ಕಾಗಿ, ಜೋಡಿಸುವ ಜೀವಂತಿಕೆಯ ಈ ಶಕ್ತಿ ಸಾಮರ್ಥ್ಯದ ಮೇಲೆ ಒತ್ತು ಕೊಡುವುದಕ್ಕಾಗಿ ಪ್ರತಿಯೊಂದು ಭಾಷೆಯಲ್ಲಿಯೂ ಇಂಥದ್ದೇ ಶಬ್ದವಿದ್ದು ಅದು ಒಂದನ್ನೊಂದು ಜೋಡಿಸುವ ಹಾಗೂ ಆ ಜೋಡಣೆಯಲ್ಲಿ ಗತಿಶೀಲತೆ ಇರುವ ಅಂಶವನ್ನು ಸ್ಪಷ್ಟೀಕರಿಸುತ್ತದೆ. ಇಂಗ್ಲೀಷಿನ 'ಟ್ರೆಡಿಶನ್' ಎಂಬುದು

ಇದೇ ಬಗೆಯ ಶಬ್ದವಾಗಿದೆ: ಅದರಲ್ಲಿಯೂ ಒಂದರಿಂದ ಇನ್ನೊಂದರ ಕಡೆಗೆ ಕೊಂಡೊಯ್ಯುವ ಅಂಶ ಸ್ಪಷ್ಟವಾಗಿದೆ.

ಭಾರತೀಯ ಲೇಖಕನು ಎಲ್ಲಿ ಮೌಲಿಕನಾಗಿದ್ದಾನೆ ಎಂಬ ಪ್ರಶ್ನೆಯನ್ನು ಆತನಿಗೆ ಕೇಳೋಣ. ಅದನ್ನು ಪರೀಕ್ಷಿಸಲು ಯಾವುದೇ ಒರೆಗಲ್ಲು ಇರುವುದಾದರೆ (ಅಥವಾ ನಾವು ತಿಳಿದಿರುವುದಾದರೆ) ಅದು ಪಾಶ್ಚಾತ್ಯ ಲೇಖಕನ ಏಕಮಾತ್ರ ಒರೆಗಲ್ಲಾಗಿದೆ. ಪಾಶ್ಚಾತ್ಯ ಲೇಖಕರೊಂದಿಗೆ ಸರಿಹೊಂದುವ ಅಥವಾ ಆ ಪಾಶ್ಚಾತ್ಯ ಒರೆಗಲ್ಲಿಗೆ ಅಪ್ಪಟವಾಗಿ ಕಾಣುವ ಭಾರತೀಯ ಲೇಖಕನು ಅವರಿಗೆ ಗ್ರಾಹ್ಯನಾಗಿದ್ದಾನೆ. ಯಾಕೆಂದರೆ ಅಷ್ಟರ ಮಟ್ಟಿಗಾದರೂ ಆತ 'ಅಂತಾರಾಷ್ಟ್ರೀಯ ಒರೆಗಲ್ಲಿಗೆ ಅಪ್ಪಟನಾಗಿ ಕಂಡು ಬಂದಿದ್ದಾನೆ' ಯಾವ ಹಂತದಲ್ಲಿ ಅವನು ಅವರಿಂದ ಭಿನ್ನನಾಗಿದ್ದಾನೋ ಅಲ್ಲಿ ಆತನನ್ನು ತ್ಯಾಜ್ಯನೆಂದು ತಿಳಿಯಲಾಗುತ್ತದೆ. ಯಾಕೆಂದರೆ ಅವನಲ್ಲಿ ಏನಾದರೂ ಒಳ್ಳೆಯತನ ಇದ್ದಿದ್ದೇ ಆದರೆ ಆತ ಒಂದಲ್ಲ ಒಂದು ಕಡೆ ಪಾಶ್ಚಾತ್ಯ ಹಿರಿಯ ಲೇಖಕರ ಸಾಲಿನಲ್ಲಿ ಕಾಣಬಹುದಾಗಿತ್ತಲ್ಲ? ಇಂಥ ದಾಸ್ಯದ ಮನೋಭಾವನೆಯಿಂದ ಭಾರತೀಯ ಲೇಖಕನ ಮೌಲಿಕತೆಯನ್ನು ಹುಡುಕಲು ಹೊರಟಿದ್ದಾರೆ. ಆತನ ಬೆಲೆ ಕಟ್ಟಲು ಹೊರಟಿದ್ದಾರೆ.

ಸೌಂದರ್ಯೋಪಾಸನೆ ಎಂಬುದೊಂದಿದೆ. ವಾಸ್ತವವಾಗಿ ಅದು ಭಾವವಿಲಾಸಿತೆಯೇ ಆಗಿದೆ. 'ನನ್ನ ಮನಸ್ಸಿನಲ್ಲಿ ಕರುಣೆ ಹುಟ್ಟಿತು: ಅಹ್ಹಾ-ಹಾ ನೋಡಿ ನನ್ನ ಕರುಣೆ ಎಷ್ಟು ಸುಂದರವಾಗಿದೆ!' ಆದರೆ ಇದಕ್ಕಾಗಿ ಎಲ್ಲ ಸೌಂದರ್ಯ ಬೋಧವನ್ನು ವಿಲಾಸಿತೆ ಎಂದು ನಿರ್ಣಯಿಸುವುದು ಅನ್ಯಾಯ, ಮೂರ್ಖತನ: ಎಲ್ಲ ಭಾವಗಳನ್ನು ಆತ್ಮಮುಗ್ಧ ಎಂದು ತಿಳಿಯುವುದು ಮೂರ್ಖತನವೂ ಹೌದು, ಕ್ರೂರತನವೂ ಹೌದು. ಭಾವಗಳು ಇನ್ನೊಬ್ಬರ ಕಡೆಗೆ ಹರಿಯುವಂಥವುಗಳಾಗಿರುತ್ತವೆ, ಇನ್ನೊಬ್ಬರನ್ನು ಪಾಲ್ಗೊಳಿಸುವಂಥವೂ, ತನ್ನನ್ನು ಸಂಪೂರ್ಣವಾಗಿ ಅಂದರೆ ಸಾರಾಸಗಟಾಗಿ ಇನ್ನೊಬ್ಬರಲ್ಲಿ ಸಮರ್ಪಿಸಿಕೊಳ್ಳುವ ಅನಿವಾರ್ಯವಾದ ಪ್ರೇರಣೆಯನ್ನು ಉಂಟು ಮಾಡುವಂಥವುಗಳೂ ಆಗಿರುತ್ತವೆ. ಇಂಥ ಭಾವಗಳೇ ಸಂಪ್ರೇಷಣೆಯ ಸೇತುವೆಗಳಾಗಿರುತ್ತವೆ: ಇಂಥ ಪ್ರತಿಯೊಂದು ಸೇತುವೆಯೂ ಸುಂದರವೂ ಆಗಿರುತ್ತದೆ, ಮೌಲಿಕವೂ ಆಗಿರುತ್ತದೆ. (ಅಲ್ಲದೆ ಹ್ಞಾಂ, ಮಂಗಳಕರವೂ ಆಗಿರುತ್ತದೆ, ಬಾಳಿಕೆಯುಳ್ಳದ್ದೂ ಆಗಿರುತ್ತದೆ) ಮತ್ತು ಇಂಥ ಸೌಂದರ್ಯದ ಜೊತೆಗೆ ಸೇರಿಕೊಳ್ಳಬೇಕೆಂಬ ವಾಂಛೆಯಾಗಲೀ ಅದರ ಕ್ಷಮತೆಯಾಗಲೀ ವಿಲಾಸತೆಯಾಗಿರುವುದಿಲ್ಲ. ಮಾನವತೆಯ ಒಂದು ಅಮೂಲ್ಯವಾದ ಗುಣವಾಗಿರುತ್ತದೆ.

## ಸಲ್ಮಾನ್‌ರಶ್ದಿಯ ಹೊಸ ಪುಸ್ತಕ
# 'ದ ಮೋರ್ಸ್ ಲಾಸ್ಟ್ ಸೈ' : ಒಂದು ಪ್ರವೇಶ

ಮೂಲ : ಜಿ. ಎಸ್. ಆಮೂರ

ಅನು : ವಿ. ಶೈಲಜ

ಸಲ್ಮಾನ್ ರಶ್ದಿಯ ಜನಪ್ರಿಯ ಕಾದಂಬರಿ 'ಮಿಡ್‌ನೈಟ್ಸ್ ಚಿಲ್ಡ್ರನ್'ನಂತೆ ಅವರ 'ದ ಮೋರ್ಸ್ ಲಾಸ್ಟ್ ಸೈ' ಸಹ 'ಭಾರತೀಯ ಸೂಲಿ'ನಿಂದ ನೇಯ್ದ ಕತೆ. ಹಲವು ವರ್ಷಗಳಿಂದ ಇಂಗ್ಲೆಂಡಿನಲ್ಲಿ ವಾಸಿಸುತ್ತಿದ್ದರೂ ಅವರಿಗೆ ತಮ್ಮ ಭಾರತೀಯ ಎಳೆಗಳು ಅತಿ ಮುಖ್ಯವಾಗುತ್ತವೆ. "ನಾನು ಅಲ್ಲಿಯವನು, ಇಂದಿಗೂ ಅಲ್ಲಿಯವನೇ", ಎಂದವರು ಇತ್ತೀಚಿನ ಸುದರ್ಶನವೊಂದರಲ್ಲಿ ಹೇಳಿದ್ದಾರೆ. ತಮ್ಮ ಜೀವನದ ಮೊದಲ ೧೭ ವರ್ಷಗಳನ್ನು ಭಾರತದಲ್ಲೇ ಕಳೆದವರು ರಶ್ದಿ. ಅನಂತರ ಫತ್ವಾ ಅವರ ಕೈಕಾಲು ಕಟ್ಟಿಹಾಕುವವರೆಗೆ ಭಾರತಕ್ಕೆ ಹಲವು ಬಾರಿ ಭೇಟಿ ನೀಡಿದ್ದರೂ ರಶ್ದಿಗೆ ಭಾರತ ಒಂದು ವಿಸ್ಮಯವಾಗಿದ್ದು, ಉದಾರವಾದಿ ಚೈತನ್ಯದ ಪ್ರತೀಕವಾಗಿದೆ.

'ದ ಮೋರ್ಸ್ ಲಾಸ್ಟ್ ಸೈ'ನ ನಿರೂಪಕ-ನಾಯಕನಾದ ಮೊರೇಸ್ ಜೊಗ್ವಾಬಿ ತನ್ನನ್ನು ಸೃಷ್ಟಿಸಿದವನ ಪರವಾಗೇ ಮಾತನಾಡುತ್ತಾನೆ. ಆತ ರಶ್ದಿಯ ತವರೂರಾದ ಮುಂಬಯಿಯ ಬಗ್ಗೆ ಭಾವೋನ್ಮಾದದಿಂದ ಹೀಗ ನುಡಿಯುತ್ತಾನೆ : "ಓ, ನನ್ನ ಕಳೆದುಹೋದ ನಗರದ ಮಂತ್ರವೇ, ಸ್ಥಳಗಳೆಲ್ಲ ಒಂದೂ ಸಿಗದಂತೆ ನನ್ನ ಕೈತಪ್ಪಿಹೋಗಿವೆ. ಅವುಗಳ ನೆನಪೇ ನನಗೀಗ ಆಸ್ತಿ." ಎಡ್ವರ್ಡ್ ಸೈದ್ ಹೇಳುವಂತೆ "ದೇಶಾಂತರವಾಗುವುದು ಅತ್ಯಂತ ವಿಷಾದಕರ ವಿಧಿ." ಮತ್ತೆ ಭಾರತಕ್ಕೆ ಬರುವ ಸ್ವಾತಂತ್ರ್ಯದಿಂದ ವಂಚಿತರಾದ ರಶ್ದಿ ಭಾರತದ ಬಗೆಗಿನ ತಮ್ಮ ಹೊಸ ಕೃತಿ ರಚಿಸಲು ನೆನಪನ್ನೇ ಅವಲಂಬಿಸಬೇಕಾಯಿತು. ಆದರೂ ವೈವಿಧ್ಯವುಳ್ಳ ವರ್ಣಮಯ ವಿವರಗಳಿಂದ ಶ್ರೀಮಂತವಾದ ಮಹಾನ್ ಕೃತಿಯಾಗಿ ಅದು ರೂಪುಗೊಂಡಿದೆ. "ತಾಯ್ನಾಡನ್ನು ಕಳೆದುಕೊಂಡವನಿಗೆ ಬರವಣಿಗೆಯೇ ಬದುಕುವ

ನೆಲೆಯನ್ನು ನೀಡುತ್ತದೆ" ಎಂಬ ಅಡೋರ್ನೋನ ಹೇಳಿಕೆ ಬರವಣಿಗೆ ಬಗ್ಗೆ ರಶ್ದಿಗಿರುವ ಭಾವನಾತ್ಮಕ ಬದ್ಧತೆಗೆ ಹಿಡಿದ ಕನ್ನಡಿಯಾಗಿದೆ. ಮೋರೇಸ್ ದುಃಖದಿಂದ ಹೇಳುತ್ತಾನೆ, "ಕೊನೆಗೆ ನಮ್ಮದೆಂದು ಉಳಿದುಕೊಳ್ಳುವುದು ಕತೆಗಳಷ್ಟೇ, ನಿರಂತರವಾಗಿ ಉಳಿವ ಕತೆಗಳಿಗಿಂತ ನಾವೇನು ಭಿನ್ನವಲ್ಲ."

ವೈಯಕ್ತಿಕ ಚರಿತ್ರೆಯನ್ನು ದೇಶದ ಚರಿತ್ರೆಯೊಂದಿಗೆ ಬೆಸೆಯುವ 'ಮಿಡ್‌ನೈಟ್ಸ್ ಚಿಲ್ಡ್ರನ್'ನ ಕಥಾನಕ ತಂತ್ರವನ್ನೇ 'ದ ಮೋರ್ಸ್ ಲಾಸ್ಟ್ ಸೈ' ಕಾದಂಬರಿಯೂ ಅನುಸರಿಸುತ್ತದೆ. ಅಲ್ಪಸಂಖ್ಯಾತ ಸಮುದಾಯದಿಂದ - ಅರ್ಧ ಕ್ರೈಸ್ತ, ಅರ್ಧ ಯೆಹೂದಿ- ನಿರೂಪಕನನ್ನು ಆರಿಸಿರುವುದು ಬರಹಗಾರನ ದೃಷ್ಟಿಕೋನವನ್ನು ಪ್ರತಿಬಿಂಬಿಸಲು ಪ್ರಜ್ಞಾಪೂರ್ವಕವಾಗಿ ಬಳಸಿದ ತಂತ್ರವಾಗಿದೆ. "ಅಲ್ಪಸಂಖ್ಯಾತ ಕೋಮಿಗೆ ಸೇರಿದವನು ಎಂಬ ಭಾವನೆಯೊಂದಿಗೇ ನಾನು ಬರೆಯುವುದು" ಎಂದು ರಶ್ದಿ ಹೇಳುತ್ತಾರೆ. ಏಬ್ರಹಂ ಜೊಗ್ವಾಬಿ ಮತ್ತು ಅರೋರ ದ ಗಾಮರ ಒಬ್ಬನೇ ಮಗ ಮೋರೇಸ್ ಸ್ಪೇನಿಗೆ ಓಡಿ ಹೋಗುತ್ತಾನೆ. ಮುಂಬಯಿಯ ಬಾಂಬ್‌ಸ್ಫೋಟದಲ್ಲಿ ತನ್ನ ಕುಟುಂಬವೂ ಷಾಮೀಲಾಗಿದ್ದು, ಅದರ ಪರಿಣಾಮಗಳನ್ನು ಎದುರಿಸಲಾಗದೆ ಪಲಾಯನ ಮಾಡುವುದು ಅದಕ್ಕೆ ಒಂದು ಕಾರಣವಾದರೆ, ವಾಸ್ಕೊ ಮಿರಾಂಡ ತನ್ನ ತಾಯಿಯಿಂದ ಕದ್ದ ಕಲಾಕೃತಿಯೊಂದನ್ನು ವಶಪಡಿಸಿಕೊಳ್ಳುವುದು ಮತ್ತೊಂದು ಕಾರಣ. ಮಿರಾಂಡ ಮೊದಲು ಅವನ ತಾಯಿಯ ಆಶ್ರಯದಲ್ಲೇ ಇದ್ದವನಾದರೂ ಆವಳ ಸಾವಿನ ನಂತರ ಅವಳ ಕಡು ವೈರಿಯಾಗುಳಿಯುತ್ತಾನೆ. ಬೆನೆಂಗಾಲಿಯ ಮಿರಾಂಡನ ಕೋಟೆಯಲ್ಲಿ ಬಂಧಿತನಾಗಿ, ಬಲಾತ್ಕಾರಕ್ಕೆ ಕಟ್ಟುಬಿದ್ದು ಮೋರೇಸ್ ಕೊಚ್ಚಿಯಲ್ಲಿ ನೆಲೆಗೊಂಡ ತನ್ನ ಕುಟುಂಬದ ಮೂರು ಪೀಳಿಗೆಗಳ ಚರಿತ್ರೆಯನ್ನು ದಾಖಲಿಸುತ್ತಾನೆ. ಮೆಣಸಿನ ವ್ಯಾಪಾರದಿಂದ ಕೊಚ್ಚಿಯಲ್ಲಿ ಅಗಾಧ ಸಂಪತ್ತನ್ನು ಈ ಕುಟುಂಬ ಶೇಖರಿಸಿತ್ತು. ಮಾದಕ ದ್ರವ್ಯಗಳನ್ನು ದೇಶದಿಂದ ಹೊರಗೆ ಕಳ್ಳಸಾಗಣೆ ಮಾಡುತ್ತಾ ವೇಶ್ಯಾವಾಟಿಕೆಯಂಥ ಅಡ್ಡದಾರಿಗಳಿಂದ ಮುಂಬಯಿಯಲ್ಲೂ ಪ್ರಮುಖ ಸ್ಥಾನ ಗಿಟ್ಟಿಸಿಕೊಂಡಿತ್ತು. ಫ್ರಾನ್ಸಿಸ್ಕೊ ದ ಗಾಮ ಕುಟುಂಬಕ್ಕೆ ಹಿರಿಯ. ಮೊದಲ ಹಂತದ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಜೈಲಿಗೆ ಹೋದ ಕಟ್ಟಾ ರಾಷ್ಟ್ರೀಯತಾವಾದಿ. ಆದರೆ ಅವನ ಮೊಮ್ಮಗಳನ್ನು ಮದುವೆಯಾಗಿ ಆಸ್ತಿಗೆ ವಾರಸುದಾರನಾದ ಜೊಗ್ವಾಬಿ ಭೂಗತ ಜಗತ್ತಿನ ದೊರೆ; ತನ್ನ ಪತ್ನಿಯನ್ನೇ ಕೊಂದ ಪಾಪಿ. ಮೋರೇಸ್ ಚರ್ಚಿಸುವ ಅಧಃಪತನ ವೈಯಕ್ತಿಕ ಸ್ವರೂಪದ್ದಷ್ಟೇ ಅಲ್ಲ, ಅದು ಇಡೀ ಕುಟುಂಬದ ಅಧಃಪತನವೂ ಹೌದು.

'ದ ಮೋರ್ಸ್ ಲಾಸ್ಟ್ ಸೈ' ಹಾಸ್ಯಭರಿತವಾಗಿದ್ದು ಲವಲವಿಕೆಯಿಂದ ಕೂಡಿದ್ದರೂ ಅಂತರಾಳದಲ್ಲಿ ಮಾತ್ರ ಅದೊಂದು ದುರಂತ ಕಾದಂಬರಿಯೇ. ಮೋರೇಸ್ ಸರಿಯಾಗೇ

ಹೇಳುವಂತೆ, "ಗತ ಜಗತ್ತಿಗಾಗಿ ಕೊನೆಯ ನಿಟ್ಟುಸಿರು" ಅದು. ಆ ಜಗತ್ತಿನಲ್ಲಿ ಹಿಂದೆ ಉದಾರವಾದಿ ಚೈನತ್ಯವಿತ್ತು; ಧರ್ಮಾತೀತ ಬಹುಮುಖತೆ ಇತ್ತು. ತುರ್ತುಪರಿಸ್ಥಿತಿಯೇ ಸನ್ನಿವೇಶಗಳ ತಿರುವಿಗೆ ಕಾರಣವಾಯಿತೆಂದು ಮೊರೇಸ್ ಗುರುತಿಸುತ್ತಾನೆ. "ತುರ್ತುಪರಿಸ್ಥಿತಿಗೆ ಮುಂಚೆ ನಾವು ಭಾರತೀಯರಾಗಿದ್ದೆವು. ಅದರ ನಂತರ ನಾವು ಕ್ರೈಸ್ತರು, ಯೆಹೂದಿಗಳಾಗಿಬಿಟ್ಟೆವು" ಎಂದವನು ಹೇಳುತ್ತಾನೆ. ಧರ್ಮಾತೀತ ಮೌಲ್ಯಗಳಿಗೆ ಕಿಲುಬು ಹಿಡಿದಿದ್ದು, ಅಯೋಧ್ಯಾ ದುರಂತದಲ್ಲಿ ಹಾಗೂ ನಂತರದ ಮುಂಬಯಿಯ ಬಾಂಬ್‌ಸ್ಫೋಟಗಳಲ್ಲಿ ಅದು ಪರಾಕಾಷ್ಠೆ ತಲುಪಿದೆ. ಆದ್ದರಿಂದಲೇ ಕೋಮುವಾದಿ 'ಮುಂಬೈಸ್ ಆಕ್ಸಿಸ್'ನ ಸ್ಥಾಪಕನೂ, ರಾಜಕೀಯ ವ್ಯಂಗ್ಯಚಿತ್ರಕಾರನೂ ಆದ ಕೇಡಿಗ ತರುಣ ರಾಮನ್ ಫೀಲ್ಡಿಂಗ್ ಖಳನಾಯಕನ ಪಾತ್ರದಲ್ಲಿ ಬರುತ್ತಾನೆ. ರಶ್ದಿಯ ಪ್ರಕಾರ ಫೀಲ್ಡಿಂಗ್‌ನ ಪಾತ್ರ ಬಾಳ್‌ಠಾಕರೆಯ ವ್ಯಂಗ್ಯ ಚಿತ್ರವಷ್ಟೇ ಆಗಿರದೆ ರಷ್ಯನ್ ರಾಷ್ಟ್ರೀಯತಾವಾದಿಗಳಾದ ಜರಿನೋವ್‌ಸ್ಕಿ ಮತ್ತಿತರನ್ನೊಳಗೊಳ್ಳುವ ಒಂದು 'ಜಾತಿ'ಯ ಪ್ರತಿನಿಧಿಯಾಗುತ್ತದೆ. ಅತ್ಯಂತ ಪರಿಣಾಮಕಾರಿ ಹೇಳಿಕೆಯೊಂದರಲ್ಲಿ ರಶ್ದಿ ಮೊರೇಸ್‌ನ ಕೈಯಲ್ಲಿ ಹೀಗೆ ಹೇಳಿಸುತ್ತಾರೆ : "ರಾಷ್ಟ್ರೀಯ ಮಟ್ಟದಲ್ಲಿ ಬೃಹತ್ ಪ್ರಮಾಣದ ದುರಂತವೇನೋ ನಡೆಯುತ್ತಿತ್ತು, ನಿಜ. ಆದರೆ ಅಲ್ಲೂ ತಮ್ಮ ತಮ್ಮ ಪಾತ್ರ ನಿರ್ವಹಿಸಿದವರು - ಒರಟಾದ ಮಾತಿನಲ್ಲಿ ಹೇಳುವುದಾದರೆ - ವಿದೂಷಕರು! ಇವರು ಮುಖ್ಯ ಪಾತ್ರಧಾರಿಗಳ ಕೊರತೆಯಿಂದಾಗಿ ಚರಿತ್ರೆಯ ನಾಟಕದಲ್ಲಿ ರಂಗಕ್ಕಿಳಿದ ಕೋಡಂಗಿಗಳು". ಒಂದಿಷ್ಟೂ ಭಯಭಕ್ತಿಯನ್ನು ತೋರದ ರಶ್ದಿ ಮುಖ್ಯ ಪಾತ್ರಧಾರಿಗಳನ್ನೂ ಬಿಟ್ಟಿಲ್ಲ. ಕಾದಂಬರಿಯಲ್ಲಿ ಜವಹರಲಾಲ ಎಂಬುದು ನಾಯಿಯ ಹೆಸರು. ಏರ್ಸ್‌ನಂಥ ಬ್ರಿಟಿಷ್ ಪರ ವ್ಯಕ್ತಿ ತಾನು ದ್ವೇಷಿಸುವ ರಾಷ್ಟ್ರೀಯ ನಾಯಕನ ಹೆಸರನ್ನು ತನ್ನ ನಾಯಿಗೆ ಇಡುವುದು ಅವನ ಪಾತ್ರಕ್ಕನುಗುಣವಾಗಿದೆ ಎನ್ನುವ ಮೂಲಕ ರಶ್ದಿ ತನ್ನ ಈ ಸಾಮಾಜಿಕ ಪ್ರಮಾದವನ್ನು ಸಮರ್ಥಿಸಿಕೊಳ್ಳಲು ಯತ್ನಿಸುತ್ತಾರೆ. ಆದರೆ ಏರ್ಸ್‌ನೊಂದಿಗೆ ಯಾವುದೇ ಸಂಬಂಧ ಹೊಂದಿರದ ಮೊರೇಸ್ ಜೊತೆ ನಾಯಿಯನ್ನು ಸ್ಪೇನಿಗೆ ತೆಗೆದುಕೊಂಡು ಹೋಗಿ, 'ಭಾರತದ ಮಾಜಿ ಪ್ರಧಾನಿಯ ಶುನಕರೂಪವಿದು' ಎಂದು ಅದನ್ನೇಕೆ ಗುರುತಿಸಬೇಕು ಎಂಬುದಕ್ಕೆ ಮಾತ್ರ ರಶ್ದಿ ವಿವರಣೆ ನೀಡುವುದಿಲ್ಲ. 'ಸೆಟಾನಿಕ್ ವರ್ಸಸ್'ನಿಂದಾದ ಅನುಭವಗಳಿಂದ ಅವರು ಪಾಠ ಕಲಿತಿಲ್ಲ ಎಂಬುದು ಇದರಿಂದ ವಿದಿತವಾಗುತ್ತದೆ.

ವ್ಯಾಪಾರ, ರಾಜಕೀಯದಂತೆ ಕಲೆ ಸಹ 'ದ ಮೋರ್ಸ್ ಲಾಸ್ಟ್ ಸೈ'ನಲ್ಲಿ ಒಂದು ಮುಖ್ಯ ಕಥಾವಸ್ತು. ಮಹಾಕಾವ್ಯ-ಪುರಾಣ ಶೈಲಿಯ ಚಿತ್ರಕಲೆಯಲ್ಲಿ ತೊಡಗಿರುವ ಅರೋರಳಲ್ಲಿ ಲೇಖಕ ಮತ್ತೊಂದು ರೂಪದಲ್ಲಿ ಪ್ರಕಟಗೊಳ್ಳುತ್ತಾನೆ. ಖ್ಯಾತ ಭಾರತೀಯ ಕಲಾವಿದೆ ಶೆರ್ಗಿಲ್‌ಳ ನಗರರೂಪೀ ಅವತಾರವೇ ಅರೋರ ಎಂದು ರಶ್ದಿ ಹೇಳಿದ್ದಾರೆ. ವಿಮಾನ ನಿಲ್ದಾಣದ ಕಲಾವಿದನಾದ ವಾಸ್ಕೊ ಮಿರಾಂಡ ಅರೋರಳ ತದ್ವಿರುದ್ಧ. ಕಲೆ

ಎಂಬ ಕಥಾವಸ್ತುವನ್ನು ಕಾದಂಬರಿಯ ಇತರ ಕಥಾವಸ್ತುಗಳೊಡನೆ ಬೆಸೆಯಲು ಅವರು ಯತ್ನಿಸಿದ್ದಾರೆ. ಆ ಕಾರಣ ಅರೋರ ಬೇರೆ ಕಲಾವಿದರೊಂದಿಗೆ ಬೆರೆಯುವುದಷ್ಟೇ ಅಲ್ಲ, ನೆಹರು, ಫೀಲ್ಡಿಂಗ್‌ರಂಥ ವಿಭಿನ್ನ ಕ್ಷೇತ್ರಕ್ಕೆ ಸೇರಿದ ವ್ಯಕ್ತಿಗಳೊಂದಿಗೂ ಸಂಬಂಧ ಹೊಂದಿರುತ್ತಾಳೆ. ಆದರೆ ರಶ್ದಿ ಈ ಬೆಸುಗೆಯನ್ನು ಸೃಷ್ಟಿಸುವುದರಲ್ಲಿ ಸಂಪೂರ್ಣ ಯಶಸ್ವಿಯಾಗಿಲ್ಲ. ಮದರ್ ಇಂಡಿಯಾದಂಥ ಭಾರತೀಯ ಚಲನಚಿತ್ರಗಳು, ಆರ್. ಕೆ. ನಾರಾಯಣ್‌ರ 'ವೆಯ್ಟಿಂಗ್ ಫಾರ್ ದ ಮಹಾತ್ಮ' ಮತ್ತು ಲಕ್ಷ್ಮಣ್‌ರ ಶ್ರೀಸಾಮಾನ್ಯನ ಬಗ್ಗೆ ಉಲ್ಲೇಖಗಳಂತೆ ಕಲಾಲೋಕದ ಆಗುಹೋಗುಗಳು ಕೂಡ ಒಂದು ಸಾಂಸ್ಕೃತಿಕ ಪರಿಸರವನ್ನು ಸೃಷ್ಟಿಸಿ ಕಾದಂಬರಿಯ ಆಳವನ್ನು ಇನ್ನಷ್ಟು ಹೆಚ್ಚಿಸುತ್ತವೇನೋ ಹೌದು. ಆದರೆ ಅರೋರಳ ಚಿತ್ರಕಲೆಯ ಬಗೆಗಿನ ಸವಿವರ ವಿಶ್ಲೇಷಣೆಗಳು ತಾಯಿ-ಮಗನ ಸಂಬಂಧಗಳಿಗೆ ಮೂರ್ತರೂಪ ನೀಡಿದರೂ ಅನಗತ್ಯ ಅತಿರೇಕಗಳೆನಿಸುತ್ತವೆ.

ಭಾರತದೊಂದಿಗೆ ಗಾಢ, ಭಾವನಾತ್ಮಕ ಸಂಬಂಧವನ್ನು ಉಳಿಸಿಕೊಂಡು ಬಂದಿರುವ ಸಲ್ಮಾನ್ ರಶ್ದಿ, ವಿ. ಎಸ್. ನೈಪಾಲ್‌ರಂಥವರು ಹೆಚ್ಚಾಗಿ ನೇತ್ಯಾತ್ಮಕ ಪ್ರತಿಕ್ರಿಯೆಯನ್ನೇ ಪ್ರೇರೇಪಿಸುವಂತಾಗುತ್ತದೆ ಎಂಬುದು ಭಾರತದ ಸಮಕಾಲೀನ ವಾಸ್ತವದ ವ್ಯಂಗ್ಯಗಳಲ್ಲೊಂದು. ಅವರುಗಳ ಬರಹಗಳಿಂದ ನಾವು ಪಡೆಯುವಂಥದ್ದು ಖಂಡಿತವಾಗಿಯೂ ಬಹಳಷ್ಟಿದೆ.

*('ದ ಮೋರ್ಸ್ ಲಾಸ್ಟ್ ಸೈ', ಲೇ : ಸಲ್ಮಾನ್ ರಶ್ದಿ, ಜೋನಾಥನ್ ಕೇಪ್, ಲಂಡನ್, ಪುಟ : 434)*

---

*ಲೇಖಕ ಸಲ್ಮಾನ್ ರಶ್ದಿಯವರ ಸಂದರ್ಶನದ ಆಯ್ದ ಭಾಗಗಳು ಮುಂದಿನ ಪುಟಗಳಲ್ಲಿವೆ.*
*- ಸಂ.*

## 'ದ ಮೋರ್ಸ್ ಲಾಸ್ಟ್ ಸೈ' ಕುರಿತು ಸಲ್ಮಾನ್ ರಶ್ದಿ......

*ಅನು : ವಿ. ಶೈಲಜ*

**ನನ್ನ ಹೊಸ ಕಾದಂಬರಿ.....**

ಕಾದಂಬರಿಯ ಹೆಸರು 'ದ ಮೋರ್ಸ್ ಲಾಸ್ಟ್ ಸೈ' ನಿಜ. ಅದಕ್ಕೆ ಗ್ರೆನೆಡಾದ ಪತನವೊಂದಿಗೆ ಸಂಬಂಧವಿರುವುದೂ ನಿಜ. ಆದರೆ ಇದು ಚಾರಿತ್ರಿಕ ಕಾದಂಬರಿಯಂತೂ ಅಲ್ಲ. ಕಾದಂಬರಿಯಲ್ಲಿನ ಬಹಳಷ್ಟು ಘಟನೆಗಳು ನಡೆಯುವುದು ಭಾರತದಲ್ಲಿ. ಒಂದಷ್ಟು ಸ್ಪೇನಿನಲ್ಲಿ. ಅದರ ಕಾಲ ೧೬ನೇ ಶತಮಾನವಲ್ಲ. ಕಾದಂಬರಿಯಲ್ಲಿ ಒಂದು ಮುಖ್ಯ ಪಾತ್ರ ಕಲಾವಿದೆಯದಾಗಿದ್ದು, ಆಕೆ ಆ ಕಾಲದ ಚಿತ್ರಗಳನ್ನು ರಚಿಸುವವಳಾಗಿದ್ದಾಳೆ. ಕಾದಂಬರಿಯಲ್ಲಿ ಮೋರ್ಸ್ ಲಾಸ್ಟ್ ಸೈ ಎಂಬುದು ಒಂದು ಕಲಾಕೃತಿಯ ಹೆಸರು. ಆ ಕಾಲದ ಬಗ್ಗೆ ಚಾರಿತ್ರಿಕ ಕಾದಂಬರಿ ರಚಿಸುವಲ್ಲಿ ನಾನು ಆಸಕ್ತನಾಗಿರಲಿಲ್ಲ. ನನಗೆ ಆಸಕ್ತಿ ಇದ್ದುದು ಸಾಂಸ್ಕೃತಿಕ ಮಿಶ್ರತಳಿಯಲ್ಲಿ. ಅಂತರ-ಜನಾಂಗೀಯ ಸಂಬಂಧಗಳಲ್ಲಿ. ಮೋರಿಶ್ ಸ್ಪೇನಿನಲ್ಲಿ ಯೆಹೂದಿಗಳು, ಕ್ರೈಸ್ತರು, ಮುಸ್ಲಿಮರು ಸೌಹಾರ್ದದಿಂದ ಸಂತೋಷವಾಗಿ ಬಾಳುತ್ತಿದ್ದರು ಎನ್ನುವ ಜನ ಅದನ್ನು ರಮ್ಯ ದೃಷ್ಟಿಯಿಂದ ಕಾಣುವುದೇ ಹೆಚ್ಚು. ಅದು ನಿಜವಲ್ಲ. ಆದರೆ, ಹಿಂದೆಂದೂ ನಡೆಯದಿದ್ದ, ಮುಂದೂ ನಡೆಯಲಾಗದ ಘಟನೆಯೊಂದು ಆಗ ಘಟಿಸಿ ಸಾಂಯೋಜಿಕ ರಚನೆಯೊಂದರ ಸೃಷ್ಟಿಯಾಗಿತ್ತು. ಯೆಹೂದಿಗಳು, ಮುಸ್ಲಿಮರು ಹೊರದೂಡಲ್ಪಟ್ಟು ಕ್ಯಾಥಲಿಕ್ ಸ್ಪೇನ್ ಮತ್ತೆ ಅಸ್ತಿತ್ವಕ್ಕೆ ಬಂದ ಸಮಯದಲ್ಲಿ ಅದು ಕೊನೆಗೊಂಡಿತು. ಈಗ ನಾನು ಭಾರತದ ಬಗ್ಗೆ ಬರೆಯುವಾಗ ಅತ್ಯಂತ ಬಹುಮುಖಿಯಾದ ದೇಶಕ್ಕೆ ಒಂದು ಬಗೆಯ ಧರ್ಮಾಂಧತೆ ಭಯಂಕರ ಸವಾಲಾಗಿರುವುದು ಕಾಣುತ್ತದೆ. ಈ ಸಂದರ್ಭದಲ್ಲಿ ಈ ಸವಾಲನ್ನು ಹಾಗೂ ಬೆದರಿಕೆಯನ್ನು ಒಡ್ಡುತ್ತಿರುವುದು ಹಿಂದೂ ಮೂಲಭೂತವಾದ.

## ಭಾರತದ ಕಾಣ್ಕೆಯ ಅಂತ್ಯದ ಬಗ್ಗೆ.....

'ದ ಮೋರ್ಸ್ ಲಾಸ್ಟ್ ಸೈ'ಯಲ್ಲಿನ 'ಲಾಸ್ಟ್' (ಕೊನೆಯ) ಎಂಬ ಪದ ಆಕಸ್ಮಿಕವಾಗಿ ಬಂದದ್ದಲ್ಲ. ಏಕೆಂದರೆ, ನನಗನಿಸುವಂತೆ, ನಾನು ಬರೆದಿರುವಂತೆ ಭಾರತದಲ್ಲಿ ಸ್ವಾತಂತ್ರ್ಯಾನಂತರ ಆಗಲಾರಂಭಿಸಿದ್ದು ಸಂಸ್ಕೃತಿಯ ಅಂತ್ಯ. ಭಾರತ ತಾಂತ್ರಿಕ ಸಂಘಟನೆಯಲ್ಲಿ ಆಸಕ್ತಿಯುಳ್ಳ, ಆರ್ಥಿಕತೆಯ ಬಗ್ಗೆ ಅತ್ಯಂತ ಸಮಾಜವಾದಿ ಕಲ್ಪನೆಯುಳ್ಳ, ಅಂತರರಾಷ್ಟ್ರೀಯವಾದಿ ದೇಶವಾಗಿರಬೇಕು; ಅತ್ಯಂತ ಕಠಿಣ ಮನಸ್ಸಿನ ಧರ್ಮಾತೀತತೆಯುಳ್ಳ ಪ್ರಭುತ್ವವಾಗಿರಬೇಕು ಎಂದು ಭಾರತದ ಬಗ್ಗೆ ಅದರ ಸ್ಥಾಪಕ ಪಿತಾಮಹರಾದ ನೆಹರು, ಗಾಂಧಿ ಯೋಚಿಸಿದ್ದರು. ಧರ್ಮ ಅತಿ ಪ್ರಮುಖ ಪಾತ್ರ ವಹಿಸುವ ದೇಶವೊಂದರಲ್ಲಿ ಇಂಥ ನಿರ್ಧಾರ ತೆಗೆದುಕೊಳ್ಳುವುದು ಅಸಾಧಾರಣವಾದದ್ದು. ಅಂದರೆ, ಧರ್ಮ ಇಲ್ಲಿ ಅತಿ ಪ್ರಮುಖ ಸ್ಥಾನ ಹೊಂದಿದೆ; ಹಾಗೆಂದು ಅದು ಮೇಲುಗೈ ಪಡೆಯಲು ಬಿಡುವುದು ಸಾಧ್ಯವಿಲ್ಲ: ಹಾಗಾಗಿ ಬಿಟ್ಟರೆ ನಾವು ನಾಳೆ ಒಬ್ಬರನ್ನೊಬ್ಬರು ಕೊಲ್ಲುತ್ತಿರುತ್ತೇವೆ ಎಂದು ಹೇಳಿದಂತೆ. ಇಂಥ ಭಾರತದಲ್ಲಿ ನಾನು ಹುಟ್ಟಿದ್ದು. ಈ ವಿಚಾರವನ್ನು ಕುರಿತೇ ನಾನು ಬರೆಯಲು ಯತ್ನಿಸುವುದು. ಏಕೆಂದರೆ ಅದು ನನ್ನಲ್ಲಿ ಅಂತರ್ಗತವಾಗಿದೆ. ಆದರೆ ಇತ್ತೀಚಿನ ಸುಮಾರು ಅರ್ಧ ಶತಮಾನದಲ್ಲಿ ಆ ಕಲ್ಪನೆ ಬದುಕುಳಿದಿಲ್ಲ. ಮುಂಚಿದ್ದಂತೆ ದೇಶ ಈಗ ಬಾಹ್ಯಮುಖಿಯಾಗಿಲ್ಲ. ಆರ್ಥಿಕ ವ್ಯವಸ್ಥೆಯನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ, ಮುಕ್ತ ಮಾರುಕಟ್ಟೆ ಆರ್ಥಿಕತೆಯ ದೃಷ್ಟಿಯಿಂದ ಅದು ಸಡಿಲಗೊಂಡಿರುವುದು ಕಾಣುತ್ತದೆ. ಇದರಿಂದಾಗಿ ಸಮಾಜವಾದಿ ಯೋಜನೆಯೂ ಅಂತ್ಯ ಕಂಡಿದೆ. ಕೋಕ ಕೋಲ, ಬಿಗ್ ಮ್ಯಾಕ್ ಒಳನುಗ್ಗುತ್ತಿವೆ. ಈ ಸಂಪತ್ತಿನ ಹಠಾತ್ ಚಿಲುಮೆ, ಬಂಡವಾಳ ಹೂಡಿಕೆಗಳಿಂದ ಭಾರತ ಹಲವು ರೀತಿಯಲ್ಲಿ ಮಾರ್ಪಾಡಾಗುತ್ತಿದೆ.

## ಪೂರ್ವ-ಪಶ್ಚಿಮಗಳ ಬಗ್ಗೆ....

ಮುಂಬಯಿಯಲ್ಲಿ ಹುಟ್ಟಿ ಬೆಳೆಯುವುದು ಒಂದು ಪರಿಶುದ್ಧ ಅನುಭವವೇನೂ ಅಲ್ಲ. ಅಲ್ಲಿ ಯಾವಾಗಲೂ ಪಾಶ್ಚಾತ್ಯ ಸಂಸ್ಕೃತಿಯೇ ಸುತ್ತುವರೆದಿದ್ದು, ಇತರ ನೂರೆಂಟು ಸಂಸ್ಕೃತಿಗಳ ಮಧ್ಯೆ ನೀವಿರುತ್ತೀರಿ. ಭಾರತೀಯ ಸಂಸ್ಕೃತಿಯೂ ಅಲ್ಲಿರುತ್ತದೆ. ನಾನು ಈ ಕಾದಂಬರಿಯಲ್ಲಿ ಹೇಳಲೆತ್ನಿಸಿರುವ ಒಂದು ಅಂಶವೆಂದರೆ, ಮುಂಬಯಿ ಒಂದು ಜಂಕ್ಷನ್‌ನಂತೆ ಎಂದು. ಅದರ ಉತ್ತರಕ್ಕಿರುವುದೆಲ್ಲ ಉತ್ತರ ಭಾರತ, ಅದರ ದಕ್ಷಿಣಕ್ಕಿರುವುದೆಲ್ಲ ದಕ್ಷಿಣ ಭಾರತ, ಅದರ ಪೂರ್ವಕ್ಕಿರುವುದೆಲ್ಲ ಪೂರ್ವ ಭಾರತ, ಹಾಗೂ ಅದರ ಪಶ್ಚಿಮಕ್ಕಿರುವುದೆಲ್ಲ ಪಶ್ಚಿಮ. ಹಾಗಾಗಿ ಭಾರತೀಯರೆಲ್ಲ ಭೇಟಿಯಾಗುವ ಸ್ಥಳ ಅದು. ಉಳಿದ ಪ್ರಪಂಚವನ್ನು ಭಾರತ ಭೇಟಿ ಮಾಡುವ ಸ್ಥಳವೂ ಅದೇ. ಅಂಥ ಸ್ಥಳದಲ್ಲಿ ನೀವು ಬೆಳೆದರೆ ಸಹಜವಾಗಿಯೇ

ಸುತ್ತಮುತ್ತಲಿನ ಪ್ರಭಾವ ನಿಮ್ಮೊಳಗೆ ಹೊಕ್ಕಿರುತ್ತದೆ. ಹಾಗಾಗಿ ಆಗ ನೀವು 'ಅಪ್ಪಟ' ಭಾರತೀಯ ಬದುಕನ್ನು ಬದುಕುತ್ತಿರುವುದಿಲ್ಲ. ಅದೇ ಪಶ್ಚಿಮಕ್ಕೆ ಬಂದರೆ ಅಲ್ಲಿ ಪಾಶ್ಚಿಮಾತ್ಯ ಜೀವನ ಎಂಬುದೊಂದು ಇರುತ್ತದೆ. ಪಶ್ಚಿಮ ಅಲ್ಲಿತ್ತು (ಮುಂಬಯಿಯಲ್ಲಿ); ಪೂರ್ವ ಇಲ್ಲಿದೆ (ಲಂಡನ್ನಿನಲ್ಲಿ). ಕಿಪ್ಲಿಂಗ್ ಹೇಳಿದ್ದು ತಪ್ಪು. ಪೂರ್ವ ಹಾಗೂ ಪಶ್ಚಿಮಗಳೆರಡನ್ನೂ ಅಷ್ಟು ಪ್ರತ್ಯೇಕವೆಂದು ಕಾಣುವ ಅಗತ್ಯ ಇಲ್ಲ. ಬಹುಶಃ ಅವನು ಹೇಳಿದ್ದು ಆಗಿನ ಕಾಲಕ್ಕೆ ಸರಿಯಿದ್ದಿರಬಹುದು, ಅದು ಈ ಕಾಲಕ್ಕೆ ಖಂಡಿತಾ ಸರಿ ಹೊಂದಲಾರದು.

*(ನ್ಯೂಸ್‌ವೀಕ್‌ನ ಸಹಾಯಕ ಸಂಪಾದಕಿ ಸಾರಾ ಕ್ರಿಸ್ಚನ್‌ಗೆ ನೀಡಿರುವ ಸಂದರ್ಶನದ ಆಯ್ದ ಭಾಗಗಳು)*

